# ಜ್ಞಾನಪ್ರಭಾ



'ಧನ್ವಂತ'



ಪ್ರಕಾಶಕರು :

ಎಚ್. ಎಸ್. ರಾವ್ ಬ್ರದರ್ಸ್,

ಬೆಂಗಳೂರು ನಗರ.

## ಅರಿಕೆ

ಈ ಲೇಖನಕ್ಕೆ ಕಾರಣರಾದ ಎಲ್ಲಾ ಗೆಳೆಯರಿಗೂ ಹೊದಿಕೆಯ ಚಿತ್ರವನ್ನು ಬರೆದುಕೊಟ್ಟ ಶ್ರೀ ಬಿ. ಆರ್. ಚಲುವಯ್ಯಂಗಾರ್ ಅವರಿಗೂ ಮುದ್ರಣಕಾರರಾದ ಚಂಪಾ ಪ್ರೆಸ್ಸಿನವರಿಗೂ ನಾನು ಋಣಿಯಾಗಿದೇನೆ.

ಬೆಂಗಳೂರು
೧೯-೬-೪೬.

'ಧನ್ವಂತ'

## ಲೇಖಕರ ಇತರ ಕೃತಿಗಳು :

| | |
|---|---|
| ರಾಗಮಿಲನ | ( ಕವನ ಸಂಗ್ರಹ ) |
| ಶ್ರೀ ಸಾಯಿಬಾಬಾ | ( ಜೀವನ ಚರಿತ್ರೆ ) |
| ಹುಣ್ಣಿಮೆಯ ರಾತ್ರಿ | ( ಕಾದಂಬರಿ ) |
| ಜ್ಞಾನಪ್ರಭಾ | ( ,, ) |

**ಅಚ್ಚಿನಲ್ಲಿ**

| | |
|---|---|
| ಪುನರಾಗಮನ | ( ಕಾದಂಬರಿ ) |
| ಆಲಾಪನೆ | ( ಕವನ ಸಂಗ್ರಹ ) |



# ಜ್ಞಾನಪ್ರಭಾ

## ೧

ಯುದ್ಧಭೀತಿ ಭಾರತದಲ್ಲಿ ಅಷ್ಟಾಗಿ ಆಗಿನ್ನೂ ಹರಡಿರಲಿಲ್ಲ. ರಕ್ಷಣಾ ಕಾನೂನು ತನ್ನ ಪ್ರಭಾವವಿನ್ನೂ ತೋರಿರಲಿಲ್ಲ. ರಾಷ್ಟ್ರದ ಹಿರಿಯ ವ್ಯಕ್ತಿಗಳು ಕಟಾಂಜನದ ಹಿಂದೆ ಬಂಧಿತರಾಗದೇಯಿದ್ದರು. ಹಿಂದೂ ಸಾಗರದಲ್ಲಿ ಹಡಗುಗಳು ಓಡಾಡುತ್ತಲೇ ಇದ್ದವು ಅವುಗಳ ಸಂಚಾರಕ್ಕೆ ಯಾರೂ ಅಡ್ಡಿ ಆತಂಕ ತಂದೊಡ್ಡಿರಲಿಲ್ಲ. ಯುದ್ಧ, ಯೂರೋಪಿನಲ್ಲಿ ಪ್ರತ್ಯಕ್ಷವಾಗಿತ್ತು ; ಭಾರತದಲ್ಲಿ ಇನ್ನೂ ಯುದ್ಧ ಭಯವಿರಲಿಲ್ಲ.

'ಜಲಜಾ' ಹಡಗು ಕಲ್ಕತ್ತೆಯಿಂದ ಬ್ರಹ್ಮಕ್ಕೆ, ಹೊರಟಿತ್ತು. ವಿವಿಧ ವೃತ್ತಿವರ್ಗದವರು ಆ ಹಡಗಿನಲ್ಲಿ ಪ್ರಯಾಣ ಮಾಡುತ್ತಿದ್ದರು. ಅನೇಕ ಸಾರಿ ಭಾರತ-ಬ್ರಹ್ಮದ ಪ್ರಯಾಣ ಮುಗಿಸಿದ 'ಜಲಜಾ' ಮತ್ತೊಮ್ಮೆ ಹೊರಟಿದ್ದಳು. ಮುಂಜಾವಿನಲ್ಲಿ ರೇವು ಬಿಟ್ಟ ಹಡಗು ಬಹುದೂರದ ಕ್ಷಿತಿಜದಲ್ಲಿ ಮರೆಯಾಯಿತು.

ರಾಜಕೀಯ ಸುಧಾರಣೆಗೆ ಆಶೆ ಪಡೆದ ರಾಷ್ಟ್ರ ಯಾವುದಿಲ್ಲ ? ಪ್ರಾಂತ್ಯಾಡಳಿತ ಪ್ರಾಮುಖ್ಯತೆಗೆ ಹೆಣಗುವವರು ಎಲ್ಲಿಯೂ ಇದ್ದಾರೆ ! ಭಾರತ-ಸ್ವಾತಂತ್ರ್ಯಕ್ಕಾಗಿ ಹೋರಾಟ ನಡಿಸುತ್ತಿರುವ ಹಾಗೆ ಬರ್ಮಿಯರೂ ಆಗ ಮೇಲಾಟ ನಡಿಸುತ್ತಿದ್ದರು. ಇಂಡಿಯಾ, ಚೀಣಾ, ಜರ್ಮ ದೇಶಗಳಿಂದ ಜನರು ಬ್ರಹ್ಮಕ್ಕೆ ಬಂದು ನೆಲೆಸಿದರು. ಸಂಪದಭಿವೃದ್ಧಿ ಮಾರ್ಗ ತೋರಿದರು. ಎಚ್ಚೆತ್ತ ಬರ್ಮಿಯರು ಜಡ ಸ್ವಭಾವ ಬಿಟ್ಟಿದ್ದರು. ಜಾತಿ, ಕೋಮು, ಜನಾಂಗ, -ಈ ಭೂತ- ರಾಜಕೀಯದಲ್ಲಿ ಸಾಮಾನ್ಯವಷ್ಟೆ ? ಬ್ರಹ್ಮದಲ್ಲಿಯೂ ಈ ಭೂತ ತಲೆದೋರಿತು, ಭಾರತ-ಬರ್ಮಿಯರ ಒಳಜಗಳ, ವೈಷಮ್ಯ ಬೆಳೆಸಿತು.

ಶ್ರೀಮಂತರು 'ಜಲಜಾ' ಹಡಗಿನ ಮೊದಲನೆಯ ಸ್ಥಾನ ಹಿಡಿದು ಪ್ರಯಾಣ ಮಾಡುತ್ತಿದ್ದಾಗ, ಸಾಮಾನ್ಯ ಪ್ರಯಾಣಿಕರೊಬ್ಬರು ಹಡಗಿನ ದ್ವಿತೀಯ ಭಾಗದಲ್ಲಿ ಹೋಗುತ್ತಿದ್ದರು. ರಂಗೂನ್ ಕಾಲೇಜಿನ ಭಾಷಾಧ್ಯಾಪಕರಾದ ಹೇಮಂತಚೌಧುರಿಯವರು ಸಾಮಾನ್ಯ ಪ್ರಯಾಣಿಕರಾಗಿದ್ದವರು.

ಮಹಾನದಿ ಮುಖಜಭೂಮಿಯಲ್ಲಿರುವ ಕಟಕ್‌ನಿಂದ ಕಲ್ಕತ್ತೆಗೆ ಬಂದು ಹಡಗೇರಿ, ಕಡಲಿನೊಳಗೆ ಚಾಚಿದ ಭೂಖಂಡದ ಕೊನೆಯಂತಿದ್ದ ರಂಗೂನ್ ಸೇರಲು ಚಿಂತೆಯಿಂದ ಬರುತ್ತಿದ್ದರು.

'ಜಲಜಾ' ಒಂದು ದಿನದ ಪ್ರಯಾಣ ಮುಗಿಸಿದಳು. ಆಗ ಹೇಮಂತರ ಮೊಗದಲ್ಲಿ ಗೆಲುವು ಉತ್ಪನ್ನವಾಯಿತು. ಅವರು ಹಡಗಿನ ಮೇಲ್ಭಾಗದಲ್ಲಿ ಅಡ್ಡಾಡುತ್ತಿದ್ದರು. ಜೀವನದಲ್ಲಿ ಬಗೆ ಬಗೆಯ ಬೇಗೆಯನ್ನು ಕಂಡ ಹೇಮಂತರ ದೃಷ್ಟಿಗೆ ಉಗ್ರ ನೋಟದ ವ್ಯಕ್ತಿಯೊಬ್ಬ ಕಂಡು ಬಂದ. ಅಗ್ನಿ ಕುಂಡದಲ್ಲಿ ಉರಿಯಲ್ಲದೆ ಮತ್ತೇನು ಕಾಣುವುದು? ಹೇಮಂತರು ಉದ್ವಿಗ್ನ ಮೂರ್ತಿಯ ನೆನಪನ್ನು ಮರೆತರು.

ಅಂದು ಸಂಜೆ ಹಡಗು ದೀಪಗೃಹವನ್ನು ಸಮೀಪಿಸಿ ಹೋಗುತ್ತಿತ್ತು. ಸುತ್ತೆಲ್ಲ ನೀರು, ಮಧ್ಯೆ ಹಡಗು, ಅಸ್ಪಷ್ಟವಿನುಗುವ ಚುಕ್ಕಿ, ವಿಸ್ತಾರ ಜಲಾಶಯ ಇವೆಲ್ಲ ನೋಡುತ್ತ ಹೇಮಂತರು ಭಾವನಾಮಯದಲ್ಲಿ ತಲ್ಲೀನರಾದರು. ಮಿಂಚು ಹೊಳೆದು ಮಾಯವಾಗುವಂತೆ ಎಲ್ಲವೂ ನೀರಿನ ಮೇಲೆ ಸುಳಿದು ಮರೆಯಾಯಿತು. ಸಂಜೆ ಅಪ್ರಿಯವಾದ ದೃಶ್ಯ ನೋಡಿದವರು ಹೆಚ್ಚು ಹೊತ್ತು ಅಲ್ಲಿ ನಿಲ್ಲಲಿಲ್ಲ. ಕೋಣೆ ಸೇರಲು ಹೊರಟರು.

ಆಗ ಕೋಮಲ ಧ್ವನಿಯೊಂದು ಅವರಿಗೆ ಕೇಳಿ ಬಂತು—

'I' ll hay my harp upon the horned moon,
That angels Passing, may its chords inspire.
And bid the vibrant stars beatout the tune,
To Capture
The deep, sweet rapture
Of the heavenly Choir.

ಹಾಡು ಮುಗಿಯಿತು. ಹಾಡುತ್ತಿದ್ದವನು ಸಂಭಾಷಣೆಯಲ್ಲಿ ತೊಡಗಿದ.

'ಮಾಂಡಲೆ ಸೇರಿ, ಮತ್ತೆಲ್ಲಿಗೆ ಹೋಗುವೆ ಮಹೇಶ?'

'ಮತ್ತೆಲ್ಲಿಗೆ! ಸಮ್ಮತಿ ದೊರಕಿದರೆ ಯುರೋಪಿಗೆ ಹೋಗುವೆ.

'ನೀನು ಮಾಂಡಲೆಗೆ ಹೋಗುವೆ, ನಾನು ರಂಗೂನಿನಲ್ಲಿರುವೆ.'

'ಹೌದು! ಭಯವೇ ಶೈಲಾ?'

'ನಾನು ಹೋಗುತ್ತಿರುವುದು ಕಲ್ಕತ್ತೆ ಅಥವಾ ಮೊಂಘೇರಿಗಲ್ಲ ನೋಡು ಮಹೇಶ'

'ಆದರೇನು ? ಶೈಲಾ ! ನೀನು ಅಂಜುತ್ತಿರುವುದು..................'

'ಹೊಸ ಪ್ರಾಂತ್ಯ, ಮಹೇಶ !

ಮಾತು ಮುಗಿಯಿತು. ಹಾಡುತ್ತಿದ್ದವನು ಮಾತಿಗಾರಂಭಿಸಿದ. ತನ್ನ ಹೆದರಿಕೆ ಗೆಳೆಯನಲ್ಲಿ ತೋರ್ಪಡಿಸಿಕೊಂಡ. ದೂರವಾಗಿ ಕೋಣೆಯಲ್ಲಿ ವಿಶ್ರಮಿಸುತ್ತಿದ್ದ ಹೇಮಂತರು ಸಂಭಾಷಣೆಯನ್ನು ಕೇಳಿದರು. ಕೇಳುವ ಮನಸ್ಸು ಅವರಿಗಿಲ್ಲದಿದ್ದರೂ ಮಾತಿನ ದಾಟಿ ಅವರನ್ನು ಎಚ್ಚರಿಸಿತು. 'ಮಹೇಶ ! ಮಹೇಶ !' ಯೆಂದು ಸಾರಿ ಸಾರಿಗೂ ಕೇಳಿ ಬರುತ್ತಿದ್ದುದು ಆಶ್ಚರ್ಯವನ್ನುಂಟು ಮಾಡಿತು. 'ಮಹೇಶ' ನೆಂಬ ಯುವಕ ವಿದ್ಯಾರ್ಥಿ ಅವರಿಗೆ ·ರಂಗೂನ್ ಕಾಲೇಜಿನಲ್ಲಿ ಪರಿಚಯವಾಗಿದ್ದ. ಆ ವಿದ್ಯಾರ್ಥಿಯೇ 'ಜಲಜಾ' ಹತ್ತಿ ಬರುತ್ತಿರುವನೇನೊ ಎಂಬ ಸಂಶಯ ಅವರಿಗಾಯಿತು. ಅವನನ್ನು ಕಾಣಬೇಕೆಂಬ ಹಂಬಲ ಹೆಚ್ಚಾದಾಗ, ಸಂಜೆಯ ಉಗ್ರನೋಟದ ನೆನಪು ಹೇಮಂತರಿಗಾಯಿತು. ಕೋಣೆ ಬಿಟ್ಟು ಹೊರಡುವುದು ಸರಿಯಲ್ಲವೆಂದು ಅವರು ಸುಮ್ಮನಾದರು.

ಮುಂಜಾನೆ ಹೇಮಂತರ ಕೋಣೆಯ ಮಗ್ಗಲಲ್ಲಿಯೇ ಅವರು ನೆನೆಯುಯುತ್ತಿದ್ದ ವಿದ್ಯಾರ್ಥಿಯ ಭೇಟಿಯಾಯಿತು. 'ನನ್ನ ಊಹೆ ಸುಳ್ಳಾಗಲಿಲ್ಲ ! ಎಂದು ಅವರು 'ಮಹೇಶ ! ಕಲ್ಕತ್ತೆಯಿಂದ ಬರುತ್ತಿರುವೆಯೇನು ?' ಎಂದು ಮಾತನಾಡಿಸಿದರು. ಅಷ್ಟರಲ್ಲಿ ಮತ್ತೊಬ್ಬ ಯುವಕ ಮಹೇಶನನ್ನು ಕೂಡಿಕೊಂಡ. ಮಹೇಶ, ಆಕಸ್ಮಿಕವಾಗಿ ಸಂಧಿಸಿದ ಹೇಮಂತರನ್ನು ವಂದಿಸಿ 'ಹೌದು ! ಕಲ್ಕತ್ತೆಯಿಂದಲೇ ಬರುತ್ತಿರುವೆ ! ನೀವು ಹೊರಟು ಬರುತ್ತಿರುವುದು ನನಗೆ ತಿಳಿಯಲಿಲ್ಲ' ಎಂದು ಉತ್ತರ ಕೊಟ್ಟ. ಪರಸ್ಪರ ಕುಶಲ ಪ್ರಶ್ನೆಗಳು ಅವರಲ್ಲಿ ನಡೆದವು.

ಕೆಲವು ಘಂಟೆಗಳಲ್ಲಿ 'ಜಲಜಾ' ರಂಗೂನ್ ತಲುಪುವುದರಲ್ಲಿದ್ದಳು. ಹೇಮಂತರು ಓರಣವಾಗಿ ಸಾಮಾನುಗಳನ್ನು ಕಟ್ಟಿ ಸಿದ್ಧಪಡಿಸಿಕೊಂಡು ಮಹೇಶನ ಬರುವಿಕೆಗಾಗಿ ಕಾಯುತ್ತಿದ್ದರು. ಮಹೇಶ ತನ್ನ ಜತೆಗಾರನೊಂದಿಗೆ ಹೇಮಂತರನ್ನು ಕೂಡಿದ. ಆಗ ಅವರು 'ಮಹೇಶ ! ನಿನ್ನೊಂದಿಗೆ ಪ್ರಯಾಣ ಮಾಡುತ್ತಿರುವ ಈ ಯುವಕ ಯಾರು' ಎಂದು ಹೊಸಬನನ್ನು ತಮ್ಮ ಕೋಣೆಗೆ

ಕರೆದು ತಂದ ಮಹೇಶನನ್ನು ಕೇಳಿದರು. 'ಇವನು ನನ್ನ ಕಿರಿಯ ಸಹೋದರ ಶೈಲೇಂದ್ರ—ನನ್ನೊಂದಿಗೆ ರಂಗೂನಿಗೆ ಬರುತ್ತಿದ್ದಾನೆ! ನಿಮಗೆ ಅವನ ಪರಿಚಯವಿಲ್ಲ' 'ನಿನಗೆ ಕಿರಿಯ ಸಹೋದರನೊಬ್ಬನಿರುವುದು ನನಗೆ ತಿಳಿಯದು' 'ಪೂರ್ಣವಾಗಿ ನಿಮಗೆ ವಿಷಯ ತಿಳಿಯದು' ಎಂದು ಮಹೇಶ ಆರಂಭಿಸಿದ-

'ನನಗೆ ಚಿಕ್ಕ ತಂದೆಯೊಬ್ಬರಿದ್ದರು. ಶೈಲೇಂದ್ರನೇ ಅವರ ಪುತ್ರ. ಮೊಂಘೀರಿನ ಮಹಾಪತನ ನಿಮಗೆ ನೆನಪಿರಬಹುದು. ಆಗ ಶೈಲಾ ಅನಾಥನಾದ. ನಾವು ಕಲ್ಕತ್ತೆಯಲ್ಲಿದ್ದೆವು. ಶೈಲನ ರಕ್ಷಣಾಭಾರವನ್ನು ಹೊತ್ತು ತಂದೆಯವರು ಅವನನ್ನು ಕಲ್ಕತ್ತೆಗೆ ಕರೆದು ತಂದರು. ಆಗ ಅವನಿಗೆ ಹದಿನೈದು ವರ್ಷ ಮಾತ್ರ. ಕಲ್ಕತ್ತೆಯಲ್ಲಿ ವ್ಯಾಸಂಗ ಮುಗಿಸಿದ ನಂತರ ಶೈಲಾ ಡೆಹರಾಡೂನ್ ವ್ಯವಸಾಯ ಶಿಕ್ಷಣ ಕೇಂದ್ರಕ್ಕೆ ಹೊರಟ. ಅಲ್ಲಿ ಎರಡು ವರ್ಷಗಳಿಂದ ಶಿಕ್ಷಣ ಪಡೆದು. ಈಗ ನನ್ನೊಡನೆ ರಂಗೂನಿಗೆ ಬರುತ್ತಿದ್ದಾನೆ. ನನ್ನನ್ನು ಮಾತ್ರ ಕಾಲೇಜಿನಲ್ಲಿ ನೀವು ನೋಡಿದ್ದಿರಿ. ಶೈಲ ನಿಮಗೆ ಈಗ ಪರಿಚಯವಾಗುತ್ತಿದ್ದಾನೆ'

'ನೀನು ಕಾಲೇಜು ಮುಗಿಸಿ ಮತ್ತೆಲ್ಲಿಗೆ ಹೋದೆ ಮಹೇಶ ?'

'ನಾನು ಕಾಯಿದೆ ಕಾನೂನು ಶಾಸ್ತ್ರ ಕಲಿತು 'ಬ್ಯಾರಿಸ್ಟರ್' ಆಗಬೇಕೆಂಬ ಇಚ್ಛೆ ತಂದೆಯವರಿಗಿದೆ. ಶೈಲನಂತೆ ಕೃಷಿಕನಾಗಲೀ 'ಬ್ಯಾರಿಸ್ಟರ್' ಆಗಿ ನಿಲ್ಲಲು ನನಗೆ ಮನಸ್ಸಿಲ್ಲ. ನನ್ನ ವೃತ್ತಿ ಶಿಕ್ಷಣ ಸೈನ್ಯಶಾಖೆಯಲ್ಲಿ ನಡೆಯಲೆಂದು ಆಶಿಸುತ್ತಿದ್ದೇನೆ. ಈವರೆಗೆ ಕಲ್ಕತ್ತೆಯಲ್ಲಿದ್ದೆ. ಈಗ ರಂಗೂನಿಗೆ ಬರುತ್ತಿದ್ದೇನೆ.'

ಮೌನದಿಂದ ಕುಳಿತಿದ್ದ ಶೈಲೇಂದ್ರ, ಮಹೇಶನು ಪೀಠಿಕೆಯನ್ನು ಮುಗಿಸಿದೊಡನೆಯೇ ಮಾತನಾಡಲಾರಂಭಿಸಿದ.

'ನಮ್ಮಿಬ್ಬರ ಪೋಷಕರು ಉನ್ನತ ಆಡಳಿತದಲ್ಲಿದ್ದಾರೆ. ಈಗ ಸಾಮ್ರಾಜ್ಯ ನಡಿಸುತ್ತಿರುವ ಸರ್ಕಾರವು ಮಹೇಶನಿಂದಲೇ ಬೆಳೆಯಬೇಕಾಗಿದೆ. ಅವನಂತಹ ತರುಣರಿಂದಲೇ ಅದು ಉದ್ಧಾರವಾಗಬೇಕು' ಎಂದು ನಗಲಾರಂಭಿಸಿದ.

'ಶೈಲಾ ! ನಿನ್ನ ಟೀಕೆ ಸಾಕು ! ಹೋದ ಕಡೆ ಎಲ್ಲೆಲ್ಲೂ ಸ್ವಾತಂತ್ರ್ಯ ಪ್ರೇಮದಿಂದ ಉಬ್ಬಿ ಉದ್ದೀಪ್ತನಾಗಿ ವಿರೋಧ ತೋರಿಸಬೇಡ' ಎಂದು ಕೆರಳಿದ ಧ್ವನಿಯಲ್ಲೇ ಮಹೇಶ ಶೈಲನನ್ನು ಎಚ್ಚರಿಸಿದ.

'ಇರಲಿರಲಿ ! ಆಟಗಳ ಸ್ಪರ್ಧೆಯಲ್ಲಿ ವೈಖರಿ ತೋರಿ, ಮಹಾ ಬಲಶಾಲಿ ಎಂದು ಹೆಮ್ಮೆಪಟ್ಟು ಉಬ್ಬಿ ಮಾತನಾಡುತ್ತಿದ್ದಿಯೇ ! ನಿನ್ನ ಉದ್ಯೋಗ ಕುರಿತು ನಾನು ಅಲ್ಲಗೆಳೆಯುತ್ತಿಲ್ಲ'

ನಡಿಯುತ್ತಿದ್ದ ಚರ್ಚೆಯಲ್ಲಿ ಹೇಮಂತರು ಪ್ರವೇಶಿಸಿ 'ಶೈಲನಿಗೆ ಮಂವೆ ಉದ್ಯೋಗವೆಲ್ಲಿ ?' ಎಂದರು.

'ಕಾಲೇಜು ವಿಧಿಯಂತೆ ಒಂದು ವರ್ಷಕಾಲ ಶೈಲಾ ಹಂಗಾಮಿ ಕೆಲಸ ಮಾಡಬೇಕು. ಬರ್ಮ ವ್ಯವಸಾಯ ಕೇಂದ್ರದಲ್ಲಿ ನಿಲ್ಲುವಂತೆ ಏರ್ಪಾಡು ನಡೆದಿದೆ. ಅವನು ರಂಗೂನಿನಲ್ಲಿರಬೇಕು'

'ನೀವಿಬ್ಬರೂ ಹಾಗಾದರೆ ರಂಗೂನಿಗೆ ಬರುತ್ತಿದ್ದೀರಿ, ಹಡಗಿಳಿದು ನೇರವಾಗಿ ನನ್ನ ಬಂಗಲೆಗೆ ಬನ್ನಿ' ಎಂದು ಹೇಮಂತರು ಶೈಲ-ಮಹೇಶರನ್ನು ಆಹ್ವಾನಿಸಿದರು.

'ಬರಲು ಅಡ್ಡಿಯೇನೂ ಇಲ್ಲ. ಶೈಲನನ್ನು ರಂಗೂನಿನಲ್ಲಿಳಿಸಬೇಕು. ನಾನು ಮಾಂಡಲೆಗೆ ಹೋಗಬೇಕು. ಅವನಿರಲು ಯೋಗ್ಯಸ್ಥಳವೊಂದು ಗೊತ್ತು ಮಾಡಬೇಕು'

'ರಂಗೂನಿನಲ್ಲಿ ನಾನಿರುವಾಗ ಹೊಸಸ್ಥಳದ ಏರ್ಪಾಡಿಗೆ ಹೋಗುವುದು ಬೇಡ ಮಹೇಶ ! ಶೈಲಾ ಮೊದಲೇ ಭಯಪಡುತ್ತಿದ್ದಾನೆ !' ಎಂದು ಅವನ ಕಡೆಗೆ ದೃಷ್ಟಿ ಹರಿಸಿ ನಕ್ಕು ಹೇಮಂತರು ಮಹೇಶನಿಗೆ ಹೇಳಿದರು.

ಸಮುದ್ರಯಾನ 'ಜಲಜಾ' ಮುಗಿಸಿದಳು. ರಂಗೂನ್‌ರೇವಿನಲ್ಲಿ ಅಸಂಖ್ಯಾತ ಜನರು ಹಡಗಿನಿಂದ ಬಂದಿಳಿಯುವ ಪ್ರಯಾಣಿಕರನ್ನು ಸ್ವಾಗತಿಸುವುದಕ್ಕಾಗಿ ಸೇರಿದ್ದರು. ರೇವನ್ನು ಹಡಗು ಸಮೀಪಿಸಿದಾಗಲೇ ಸ್ವಾಗತ ಸಂಕೇತ ದೋಪಾದಿ ವಾದ್ಯಧ್ವನಿಯಾಗತೊಡಗಿತು. 'ಜಲಜಾ' ರಂಗೂನು ತಲುಪಿದಳು. ಹೇಮಂತರು, ಮಹೇಶ-ಶೈಲರೊಂದಿಗೆ ಬಂಗಲೆ ಸೇರಿದರು.

೨

ರಂಗೂನ್ 'ಸರ್ಕ್ಯುಲರ್' ಹಾದಿಯಲ್ಲಿ ವಿದ್ಯಾಲಯದ ಅಧ್ಯಾಪಕರ ಬಂಗಲೆಗಳಿವೆ. ಅಲ್ಲಿಯೇ ಹೇಮಂತರು ವಾಸಿಸುತ್ತಿದ್ದ ಬಂಗಲೆಯನ್ನು ಶೈಲ-ಮಹೇಶರಿಬ್ಬರೂ ಹೊಕ್ಕರು. ಬಂಗಲೆಯ ಹೆಸರು 'ಮೈಥಿಲಿ' ಅನೇಕಾನೇಕ ಮರಗಳಿದ್ದು ಶಾಂತಿವಾತಾವರಣ ತರುತ್ತಿದ್ದ ನೆಲೆಯಲ್ಲಿ ಹೇಮಂತರು,

ಮೊದಲು ತಮ್ಮ ಕುಮಾರಿಯೊಂದಿಗೆ ವಾಸಿಸುತ್ತಿದ್ದರು. ವಿದ್ಯಾರ್ಥಿಗಳನ್ನು 'ಮೈಥಿಲಿ' ಗೆ ಹೇಮಂತರು ಕರೆದು ತಂದಾಗ, ಅವರ ಮಗಳು ಅಲ್ಲಿರಲಿಲ್ಲ— ಕಟಕ್ ನಗರದಲ್ಲಿ ಬಿಟ್ಟು ಬಂದಿದ್ದರು. ಮಗಳ ವಿಷಯವಾಗಿ ನಡೆದ ಕಲಹದಲ್ಲಿ ಅಪಮಾನಿತರಾದ ಹೇಮಂತರು, ತಮ್ಮ ಮಾವಂದಿರಾದ ವಿನಯ ಭೂಷಣ ಚೌಧುರಿಯವರನ್ನು ತಿರಸ್ಕರಿಸಿ 'ಜಲಜಾ' ಹತ್ತಿ ರಂಗೂನಿಗೆ ಬಂದಿದ್ದರು.

ಹೇಮಂತರ ಮಗಳ ಹೆಸರು ಪ್ರಭಾ. ಮೊದಲು ಅವಳು 'ಮೈಥಿಲಿ' ಯಲ್ಲಿಯೇ ಬೆಳೆದಳು. ಬೆಳೆದು ಪ್ರಬುದ್ಧಳಾದ ಮೇಲೆ ಅವಳ ಅಜ್ಜಂದಿರು 'ಕಟಕ್ ನಗರದಲ್ಲಿಯೇ ನಿಲ್ಲಲಿ' ಎಂದು ಹಠ ಮಾಡಿದರು. ಈ ಇಚ್ಛಾಹಠ ಕಲಹದಲ್ಲಿ ಮುಕ್ತಾಯಗೊಂಡಿತು.

ದರ್ಪದಲ್ಲಿ ಒಂದು ಕೈ ಮೇಲೆನಿಸಿದ ಚೌಧುರಿಯವರು, ತಾವು ಒರಿಸ್ಸಾ ರಾಜರ ಪೀಳಿಗೆಯವರೆಂಬ ಪ್ರತಿಷ್ಠೆಯಿಂದ ಹೇಮಂತರನ್ನು ಕೀಳಾಗಿ ಭಾವಿಸಿದರು. 'ನನಗೊಬ್ಬಳು ಮಗಳಿದ್ದಳು. ಅವಳಿಗೆ ಬದಲಾಗಿ, ಮೊಮ್ಮಗಳೊಬ್ಬಳಿದ್ದಾಳೆ! ಅವಳನ್ನು ಕಳುಹಿಕೊಡಲಾರೆ' ಎಂದು ಖಚಿತವಾಗಿ ನುಡಿದುಬಿಟ್ಟರು. 'ಅವರಿಗೆ ಮೊಮ್ಮಗಳ ಮೇಲೆ ಅಧಿಕಪ್ರೀತಿಯಿರಬಹುದು. ಅಂತಸ್ತು, ಅಧಿಕಾರ ಹಾಗಿರಲಿ ; ಈ ತುಚ್ಛ ಅವಹೇಳನ ನಾನು ಸಹಿಸಲಾರೆ' ಎಂದು ಹೇಮಂತರು ಚೌಧುರಿಯವರಿಗೆ ಸದುತ್ತರ ಕೊಟ್ಟು ಬಂದರು. 'ಅವರು ಭಾವಿಸಿರುವಷ್ಟು ನಾನು ಕೀಳಾಗಿಲ್ಲ, ದರ್ಪದಿಂದ ಮೆರೆಯುವರೆದುರಿಗೆ ತಲೆತಗ್ಗಿಸಿ ನಡೆಯಬೇಕಾದುದೇನೂ ಇಲ್ಲ!' ಎಂದವರು ಚೌಧುರಿಯವರೊಂದಿಗೆ ಪತ್ರವ್ಯವಹಾರವನ್ನೂ ನಿಲ್ಲಿಸಿಬಿಟ್ಟರು.

ಉಳಿದವಳೊಬ್ಬಳು ಪ್ರಭಾ. ರಂಗೂನಿನಲ್ಲಿ ಪ್ರಭೆಗೆ ಶಿಕ್ಷಣಕೊಟ್ಟು ಪ್ರೀತಿಯಿಂದ ಹೇಮಂತರು ಸಾಕಿದರು. ಅಜ್ಜನೊಂದಿಗೆ ಇರಲು ಪ್ರಭೆಗೂ ಮನಸ್ಸಿರಲಿಲ್ಲ. ಅಪಾರವಾದ ಧನಸಂಪತ್ತಿಗೆ, ಆಡಳಿತಕ್ಕೆ, ಪೂರ್ಣ ಉತ್ತರಾಧಿಕಾರಿಣಿ ಪ್ರಭೆಯೇ ಆಗಬೇಕೆಂದು ಚೌಧುರಿಯವರು ಮಾಡಿಕೊಂಡು, ನಿಲ್ಲಿಸಿಕೊಳ್ಳಲು ಸಾಹಸಪಟ್ಟರು. ಸಾಹಸ, ಗಲಭೆಗೆ ಕಾರಣವಾಯಿತು. ಹೇಮಂತರು ದೂರವಾದರು. ಪ್ರಭಾ ಕಟಕ್‌ನಗರದಲ್ಲಿಯೇ ಉಳಿದಳು. ಒಲವು ನಲವುಗಳು, ನೋವು ಕಾವುಗಳು ಅಚ್ಚಳಿಯದೆ ಪ್ರಭೆಯ ಹೃದಯದಲ್ಲಿ ಸ್ಥಿರತು ಅನುಭವವಾಗಿದ್ದರೂ, ತಂದೆಯ ಮೇಲಣ ಅಭಿಮಾನ ಅವಳಿಗೆ ಕಡಿಮೆ

ಯಿರಲಿಲ್ಲ. ಹೇಮಂತರು ಕಟಕ್‌ನಗರ ತೊರೆದು ರಂಗೂನಿಗೆ ಹೊರಟಾಗ, ಪ್ರಭೆಗಿನ್ನೂ ಹದಿನಾರು ವರ್ಷ ವಯಸ್ಸಾಗಿತ್ತು.

೩

ಮಹೇಶ-ಶೈಲೇಂದ್ರರು 'ಮೈಥಿಲಿ' ಯಲ್ಲಿ ನಿಂತರು. ಶೈಲನಿಗೆ ಹೇಮಂತರ ಪೂರ್ಣ ಪರಿಚಯವಾಯಿತು. ಮಹೇಶ, ಶೈಲನನ್ನು 'ಮೈಥಿಲಿ' ಯಲ್ಲಿಯೇ ಬಿಟ್ಟು ಮಾಂಡಲೆಗೆ ಹೊರಟ.

'ಜಲಜೆ' ಯಲ್ಲಿಯೂ 'ಮೈಥಿಲಿ' ಯಲ್ಲಿಯೂ ಶೈಲನ ನಡೆವಳಿಕೆ ಕಂಡು ಮೆಚ್ಚಿದ ಹೇಮಂತರು ಒಲುಮೆಯನ್ನು ಒಮ್ಮೆಯೇ ತೋರ್ಪಡಿಸಲಿಲ್ಲ. ಹೇಮಂತರು ಗೌರವಸ್ಥ ಹಿರಿಯರೆಂಬ ಪೂಜ್ಯಭಾವ ಶೈಲನಲ್ಲಿಯೂ ಬೆಳೆದಿತು. ಅವರ ಪ್ರತಿಯೊಂದು ಪ್ರಶ್ನೆಗೂ ಎಷ್ಟು ಔಚಿತ್ಯವೋ ಅಷ್ಟು ಮಾತ್ರವೇ ಶೈಲ ಉತ್ತರ ಕೊಡುತ್ತಿದ್ದ. 'ಶೈಲ ನಮ್ಮ ಪ್ರಾಂತ್ಯದವ. ಇರುವಿಕೆಯೂ ನನಗೆ ಸಮ್ಮತ. ಅವನು ರಂಗೂನಿನಲ್ಲಿರುವವರೆಗೆ ಬೇರೆ ಎಲ್ಲೂ ಹೋಗದಿರಲಿ. 'ಮೈಥಿಲಿ' ಯಲ್ಲಿಯೇ ವಾಸಿಸಲಿ. ಮಗಳನ್ನು ಮರೆತು, ಪ್ರಾಂತ್ಯ ಬಂಧುವೊಬ್ಬನನ್ನು ಕೂಡಿ ನೆಮ್ಮದಿಯಿಂದಿರುವೆ' ಎಂದು ಹೇಮಂತರು ಬಯಸಿದರು. ಶೈಲನ ರಕ್ಷಣಾಭಾರ ಹೊತ್ತ ಮಹೇಶನ ತಂದೆ, ಅಬುಜದತ್ತರ ಹಾದಿ ನೋಡುತ್ತ ಕುಳಿತರು.

ಅಬುಜದತ್ತರು ಬರ್ಮಾ ಸರ್ಕಾರದ ಹಿರಿಯ ಹುದ್ದೆಯಲ್ಲಿದ್ದರು. ಅವರಿದ್ದುದು ಮಾಂಡಲೆಯಲ್ಲಿ. ಶೈಲನನ್ನು 'ಮೈಥಿಲಿ' ಯಲ್ಲಿ ಬಿಟ್ಟು ಹೊರಟು ಹೋದ ಮಹೇಶ, ಮಾಂಡಲೆಗೆ ಬಂದ. ಹೇಮಂತರೊಡನೆ ಶೈಲನಿದ್ದ ವಿಚಾರ ದತ್ತರಿಗೆ ತಿಳಿಸಿದ ಅವರು 'ಶೈಲನಿಗೂ ಹೇಮಂತರಿಗೂ ಹೇಗೆ ಪರಿಚಯವಾಯಿತು'? ಎಂದು ಪ್ರಶ್ನಿಸಿದರು. ಮಹೇಶ 'ಜಲಜೆ' ಯಿಂದ ಮೊದಲಾಗಿ ನಡೆದ ವಿಷಯವನ್ನೆಲ್ಲಾ ವಿವರಿಸಿದ. 'ಒಳ್ಳಿತಾಯಿತು' ಎಂದು ದತ್ತರು, ಮಾಂಡಲೆಯಿಂದ ರಂಗೂನಿಗೆ ಬಂದರು.

ಅನಿರೀಕ್ಷಿತವಾಗಿ 'ಮೈಥಿಲಿ' ಯ ಮುಂದೆ ಬರ್ಮಾ ಸರ್ಕಾರದ ಮೋಟಾರೊಂದು ಕಾಣಿಸಿತು. ಅಬುಜದತ್ತರ ಆಗಮನವನ್ನೇ ನೋಡುತ್ತಿದ್ದ ಹೇಮಂತರು ಅವರನ್ನು ಬರಮಾಡಿಕೊಂಡರು. ಆಗ ಶೈಲ ಎಲ್ಲಿಯೋ ಹೋಗಿದ್ದ. ದತ್ತರಿಗೂ ಹೇಮಂತರಿಗೂ ಹಿಂದೆಯೇ ಪರಿಚಯವಾಗಿ ಸ್ನೇಹ ಬೆಳೆದಿತ್ತು. ಅವರಿಬ್ಬರೂ

ಬಂಗಲೆಯ ಮಧ್ಯೆಭಾಗದಲ್ಲಿ ಕುಳಿತು ಮಾತನಾಡುತ್ತಿದ್ದರು. ಶೈಲ, ಎಲ್ಲಿಗೋ ಹೋಗಿದ್ದವನು 'ಮೈಥಿಲಿ' ಗೆ ಬಂದ. ತಂದೆಯವರು ಮಾತನಾಡುತ್ತಿದ್ದುದನ್ನು ಕಂಡು ಹತ್ತಿರ ಬಂದ. ದತ್ತರು ಶೈಲನನ್ನು ಹತ್ತಿರ ಕೂಡಿಸಿಕೊಂಡರು ವ್ಯಾಸಂಗ ವಿಷಯವೇ ಮೊದಲಾಗಿ ಎಲ್ಲವನ್ನೂ ಕೇಳಲಾರಂಭಿಸಿದರು.

'ಹಡಗಿನ ಪ್ರಯಾಣ ಹೇಗಾಯಿತು ? ಶೈಲಾ!'

'ಅಡಚಣೆಯೇನೂ ಆಗಲಿಲ್ಲ. ರಂಗೂನ್ ಸೇರುವುದರೊಳಗಾಗಿಯೇ ಹೇಮಂತರ ಭೇಟಿ ನಮಗಾಯಿತು. ರೇವಿನಿಂದ ನೇರವಾಗಿ ನಮ್ಮನ್ನು ಇಲ್ಲಿಗೆ ಕರೆದು ತಂದರು' ಎಂದು ಶೈಲಾ ದತ್ತರ ಪ್ರಶ್ನೆಗೆ ಉತ್ತರವಿತ್ತ.

'ಅನಾವಶ್ಯಕವಾದ ತೊಂದರೆಯನ್ನು ನೀವು ವಹಿಸಿದಿರಿ' ಎಂದು ದತ್ತರು, ಹೇಮಂತರಿಗೆ ಕೃತಜ್ಞತೆ ತೋರಿದರು.

'ನನಗೇನು ತೊಂದರೆಯಾಯಿತು! ವಿದ್ಯಾರ್ಥಿಗಳನ್ನು ಬರಮಾಡಿಕೊಳ್ಳುವುದು ನನ್ನ ವಾಡಿಕೆ. ಮಹೇಶನನ್ನು ಕಂಡು ಬಹುದಿನವಾಗಿತ್ತು. ಹಡಗಿನಲ್ಲಿಯೇ ಭೇಟಿಯಾದ. ಶೈಲ ಅವನ ಸಹೋದರನೆಂದೂ ನಮ್ಮ ಪ್ರಾಂತ್ಯದವನೆಂದೂ ತಿಳಿದು ಬಂತು. ನನ್ನೊಡನೆಯೇ ನಿಲ್ಲುವಂತೆ ಒತ್ತಾಯಪಡಿಸಿದ'

'ನಾನು ಮಾಂಡಲೆಯಲ್ಲಿರುವೆ, ಶೈಲ ರಂಗೂನಿನಲ್ಲಿರಬೇಕಾಗುವುದು. ಯೋಗ್ಯಸ್ಥಳವೊಂದು ಅವನಿಗೆ ಗೊತ್ತುಮಾಡಿಕೊಡಬೇಕು!' ಎಂದು ದತ್ತರು, ತಮ್ಮ ಆಗಮನದ ಕಾರಣವನ್ನು ಹೇಮಂತರಿಗೆ ತಿಳಿಸಿದರು.

ದತ್ತರು ಮಾತು ಮುಂದುವರಿಸಲು ಅವಕಾಶ ಕೊಡದೆ ಹೇಮಂತರು 'ಶೈಲ ರಂಗೂನಿನಲ್ಲಿರುವವರೆಗೆ ಬೇರೆ ನಿವೇಶನ ಹುಡುಕಿ ಹೋಗುವ ಮಾತು ಬೇಡ. ಆ ತೊಂದರೆಯೇ ನಿಮಗೆ ಬೇಡ! ನೀವು ಒಪ್ಪುವುದಾದರೆ ಇಲ್ಲಿಯೇ ಅವನು ನಿಲ್ಲಲಿ.' ಮತ್ತೆ, ನಿಧಾನವಾಗಿ 'ಅವನು ನಮ್ಮ ಪ್ರಾಂತ್ಯದವ, ಬಂಧುವೊಬ್ಬನಿಗೆ ಸಹಾಯವಾಗಿರಲು ನನಗೆ ಒಪ್ಪಿಗೆಯಿದೆ. ಶೈಲ ಇಲ್ಲಿಯೇ ನಿಂತು, ಉದ್ಯೋಗ ನೋಡಿಕೊಂಡು ಹೋಗುವಂತೆ ಅವಕಾಶ ಕೊಡಬೇಕು' ಎಂದು ದತ್ತರಲ್ಲಿ ಬಿನ್ನವಿಸಿಕೊಂಡರು. ಶೈಲನಿಗೂ ಆಶ್ಚರ್ಯವಾಗುವಂತೆ ಹೇಮಂತರು ಒಂದು ಮಾದರಿಯ ಪ್ರೀತಿಯಿಂದ ಹೇಳಿಕೊಂಡರು. 'ಶೈಲನಿಗೂ ನಿಮಗೂ ಅಷ್ಟು ಬಾಂಧವ್ಯ ಬೆಳೆದಿರುವುದಾದರೆ ಅಡ್ಡಿಯೇನೂ ಇಲ್ಲ' ಎಂದು ದತ್ತರು ಹೇಮಂತರಿಗೆ ತಮ್ಮ ಸಮ್ಮತಿಯಿತ್ತರು.

೪

ರಂಗೂನ್ ನಗರದ ಸಾರ್ವಜನಿಕ ವನದ ಮುಂದೆ ಮೋಟಾರು ನಡೆದು ಕಾರ್ಯಾಲಯದ ಬಳಿ ನಿಂತಿತು. ದತ್ತರು ಶೈಲನೊಂದಿಗೆ ಪ್ರವೇಶಮಾಡಿದರು. ಅಧಿಕಾರಿ ವರ್ಗವೆಲ್ಲಾ ದತ್ತರ ಆಗಮನದಿಂದ ಎಚ್ಚೆತ್ತು, ಮರ್ಯಾದೆ ತೋರಲು ಮುಂದೆ ಬಂದರು. ಶೈಲಾ ಭ್ರಾಂತನಾಗಿ ನಿಂತು ನೋಡುತ್ತಿದ್ದ. ಕಾರ್ಯಾಲಯದ ಮುಖ್ಯಾಧಿಕಾರಿ ದತ್ತರನ್ನು ತನ್ನ ಪೀಠದಲ್ಲಿ ಕೂಡಿಸಿದ. ದತ್ತರು ಶೈಲನನ್ನು ಅವನಿಗೆ ಪರಿಚಯ ಮಾಡಿಕೊಟ್ಟರು. 'ನೀನು ಇಲ್ಲಿ ಉದ್ಯೋಗ ನಡಿಸಬೇಕು!' ಎಂದು ಸೂಚನೆ ಕೊಟ್ಟರು. ಅಧಿಕಾರಿಗೆ ಶೈಲನನ್ನು ಒಪ್ಪಿಸಿದ ನಂತರ ದತ್ತರು ಎಲ್ಲಿಗೋ ಹೊರಟರು.

ಶೈಲಾ ತಾನು ನಿರ್ವಹಿಸಬೇಕಾದ ಕೆಲಸವನ್ನು ಅಧಿಕಾರಿಯಿಂದ ತಿಳಿದ. ಸಮಸ್ತ ವಿಷಯವನ್ನು ಪರಿಚಯ ಮಾಡಿಕೊಳ್ಳುವ ವೇಳೆಗೆ ಎತ್ತಲೋ ಹೊರಟಿದ್ದ ದತ್ತರ ಮೋಟಾರು ಕಾರ್ಯಾಲಯದ ಸಮೀಪಕ್ಕೆ ಬಂತು. ಶೈಲಾ ಅಧಿಕಾರಿಗೆ ವಂದಿಸಿ ಮೋಟಾರು ಹತ್ತಿದ.

ಅಬುಜದತ್ತರು ಶೈಲನಿಗೆ ಸ್ಪಷ್ಟವಾಗಿ 'ನಿನಗೆ ಬೇಕಾಗುವ ಸಹಾಯ ಹೇಮಂತರಿಂದ ದೊರೆಯುವುದು. ಮುಖ್ಯಾಧಿಕಾರಿಯೂ ಉದ್ಯೋಗದಲ್ಲಿ ಎಚ್ಚರಿಕೆ ತೆಗೆದುಕೊಳ್ಳುವನು. ಕೆಲಸವನ್ನು ಧೈರ್ಯದಿಂದ ಮಾಡುತ್ತಿರು!' ಎಂದು ಪ್ರೋತ್ಸಾಹ ಹೇಳಿ ಸೂಂಡಲೆಗೆ ಹಿಂದಿರುಗಿದರು.

ಶೈಲಾ ರಂಗೂನ್ ನಗರದಲ್ಲಿ ಕ್ರೀಡಾವನದ ಮೇಲ್ವಿಚಾರಕನಾಗಿ ನಿಂತ. ಕ್ರೀಡಾವನದಲ್ಲಿಯೂ ಸಂಬಂಧಿಸಿದ ಕಾರ್ಯಾಲಯದಲ್ಲಿಯೂ ಅವನಿಗೆ ಕೆಲಸವಿರುತ್ತಿತ್ತು. ದೊರೆತ ಅಧಿಕಾರಿ ಒಳ್ಳೆಯವನೆ, ಸಹವರ್ತಿಗಳು ಮಾತ್ರ ಬರ್ಮಿಯರೆ ಹೆಚ್ಚಾಗಿದ್ದರು. ಅವರೊಡನೆ ಸಹಕರಿಸಿ ಕೆಲಸ ನಡೆಸುವುದು ಅಸಾಧ್ಯವಾಗಿತ್ತು. ಉಪದ್ರವ ಹೆಚ್ಚಾಗಿ ಎಲ್ಲವನ್ನೂ ತಾಳ್ಮೆಯಿಂದ ಸಹಿಸಿದ ಶೈಲ.

ಕಾರ್ಯಾಲಯದ ಕೆಲಸ ತೀರ ಯಾಂತ್ರಿಕ ರೀತಿಯಲ್ಲಿದ್ದವು. ಅಧಿಕಾರಿಗೆ ಶೈಲ ತೃಪ್ತಿಯಾಗಿದ್ದರೂ ಜತೆಗಾರ ಉದ್ಯೋಗಿಗಳಿಗೆ ಬೇರೆಯಾಗಿದ್ದ. ಶೈಲನ ಗೆಳೆತನ ಬೆಳೆಸಲಿಕ್ಕೆ ಯಾರೂ ಮುಂದಾಗಿ ಬರಲಿಲ್ಲ.

'ಮೈಥಿಲಿ' ನಿಜವಾಗಿಯೂ ಶೈಲನಿಗೆ ಜ್ಞಾನದ ನಿಧಿಯಾಯಿತು. ಹೇಮಂತರು ಕೊಡಿಟ್ಟ ಪುಸ್ತಕ ಭಂಡಾರದಲ್ಲಿ ಪ್ರಿಯವಾದುದನ್ನು ಆರಿಸಿ ಓದುತ್ತಿದ್ದ. ಕಾಲೇಜು ಮುಗಿದು ತೆರಪು ಆದೊಡನೆಯೇ ಹೇಮಂತರು 'ಮೈಥಿಲಿ' ಗೆ ಬರುತ್ತಿದ್ದರು. ಆಗ ಹೇಮಂತ-ಶೈಲರಲ್ಲಿ ಚರ್ಚೆ ನಡೆಯುತ್ತಿದ್ದವು. ಅಬುಜದತ್ತರು ಮಾಂಡಲೆಯಿಂದ ರಂಗೂನಿಗೆ ಆಗಾಗ ಬರುತ್ತಲೇ ಯಿದ್ದರು. ಹೇಮಂತರು ಶೈಲನ ವಿಚಾರ ಮೊದಲಾದವನ್ನು ದತ್ತರಿಗೆ ತಿಳಿಸುತ್ತಿದ್ದರು.

ರಂಗೂನಿನಲ್ಲಿ ನಿಂತ ಎರಡು ತಿಂಗಳನಂತರ ಶೈಲ ಮಾಂಡಲೆಗೆ ಬಂದ. ಮಹೇಶನೂ ಅಲ್ಲಿಯೇ ಇದ್ದ. ಇಬ್ಬರನ್ನೂ ಬರ್ಮದ ಜಟಿಲ ಅರಣ್ಯ ಭಾಗಕ್ಕೆ ದತ್ತರು ಕರದೊಯ್ದರು. ಘೋರಾರಣ್ಯದ ಮಧ್ಯಭಾಗದಲ್ಲಿ ಮೋಟಾರು ಹೊರಟಿತು. ಮೃಗಬೇಟೆಯಲ್ಲಿ ಆಸಕ್ತಿಯುಳ್ಳವರಾದ ದತ್ತರು ಕೋವಿಯೊಂದಿಗೆ ಬಂದಿದ್ದರು. ಗಗನವನ್ನು ಮುಟ್ಟುತ್ತಿದ್ದ ವೃಕ್ಷಗಳನ್ನು ಮತ್ತು ಹಾದಿಯಲ್ಲಿ ಸಿಕ್ಕುತ್ತಿದ್ದ ಜಲವಸತಿಯನ್ನು ನೋಡುತ್ತಾ ಮಹೇಶ ಸಾಗುತ್ತಿದ್ದ. ಕಾಡುಮೃಗಗಳ ಅಪೂರ್ವ ಕೀರಾಟ ಕೇಳಿದಾಗ ಅವನು ಬೆದರಿ ನೋಡುತ್ತಿದ್ದ. ಡೆಹರಾಡೂನ್ ಅರಣ್ಯಭಾಗದಲ್ಲಿ ಸುತ್ತಾಡಿ ಅನುಭವಹೊಂದಿದ ಶೈಲನಿಗೆ, ಬರ್ಮದ ಭಯಂಕರ ಕಾಡುಭಾಗ ನೋಡುವ ಸಮಯ ಒದಗಿತು. ಈ ಕಾನನ ಪ್ರದೇಶ, ಕ್ರೂರಮೃಗಗಳ ಕೀರಾಟ ಕೇಳಿಯೇ ಪಾಶ್ಚಾತ್ಯರು, ಭಾರತವೆಲ್ಲಾ ಅರಣ್ಯಮಯವೆಂದು ಭಾವನೆ ಮಾಡಿಕೊಂಡಿರುವುದು ಎಂದು ತಿಳಿದ. ಕಾಡುದಾರಿ, ಏರು, ತಗ್ಗು; ದಿಣ್ಣೆಗಳಲ್ಲಿ ಮೋಟಾರು ಹರಿದು ಪುನಃ ನಗರದ ವಿಸ್ತಾರ ರಸ್ತೆಯನ್ನು ಸೇರುವವೇಳೆಗೆ ಮಹೇಶ ಕಣ್ಣುತೆರೆದ. 'ಭಯಾನಕ ಅರಣ್ಯ ದರ್ಶನದ ಗೊಡವೆ ನನಗೆ ಬೇಡ! ನಿನಗೆಯೇ ಇರಲಿ!' ಎಂದು ಶೈಲನನ್ನು ಕುರಿತು ಅಪಹಾಸ್ಯ ಮಾಡಿದ.

ಅಬುಜದತ್ತರಿಗೆ ಮಹೇಶನಲ್ಲದೆ ಇಬ್ಬರು ಹೆಣ್ಣುಮಕ್ಕಳಿದ್ದರು. ದತ್ತರು ಮಾಂಡಲೆಯಲ್ಲಿದ್ದಾಗ, ಮಹೇಶ ಉದ್ಯೋಗದಲ್ಲಿ ನಿಲ್ಲುವ ಸಾಹಸ ಮಾಡುತ್ತಿದ್ದ. ಅಧಿಕಾರ ಆಸಕ್ತನೂ ಗೌರವಾದರಕ್ಕೆ ತೆಕ್ಕೆ ಬೀಳುವನೂ ಆಗಿದ್ದ ಮಹೇಶನ ಇಚ್ಛೆ ಅವರಿಗಾಗಲೇ ತಿಳಿದಿತ್ತು. ಅಬುಜದತ್ತರ ಮಡದಿ ನಳಿನೀ ದತ್ತರಿಗೆ ಶೈಲನಲ್ಲಿ ವಿಶೇಷ ಮಮತೆಯಿತ್ತು. ದರ್ಪ, ಅಹಂಕಾರದಲ್ಲಿ ಮೆರೆ

ಯುತ್ತಿದ್ದ ಮಹೇಶನನ್ನೂ ಸುಜನ, ಶಾಂತಮೂರ್ತಿಯಾಗಿದ್ದ ಶೈಲನನ್ನೂ ಕಾಣುತ್ತಿದ್ದ ನಳಿನೀದತ್ತರಿಗೆ, ಅಗಾಧ ವ್ಯತ್ಯಾಸ ತಿಳಿದುಬಂದಿತು. ಶೈಲ ಅವರನ್ನು ಆನಂದಗೊಳಿಸುತ್ತಿದ್ದ. ಎಲ್ಲರೂ ಅವನನ್ನು ಪ್ರೀತಿಸುತ್ತಿದ್ದರು.

ಮಾಂಡಲೆಯಲ್ಲಿ ಒಂದು ವಾರವಿದ್ದು ಶೈಲ ರಂಗೂನಿಗೆ ಬಂದ. ಯೂರೋಪಿಗೆ ಹೋಗಬೇಕೆಂದಿದ್ದ ಮಹೇಶನ ಇಚ್ಛೆಗೆ ದತ್ತರ ಬೆಂಬಲ ದೊರೆಯಲಿಲ್ಲ. ಅವನು ನಿರುಪಾಯನಾದ. 'ಕಲ್ಕತ್ತೆಯಲ್ಲಿರು' ಎಂದು ದತ್ತರು ಅವನನ್ನು ಕಳುಹಿಸಿಕೊಟ್ಟರು.

೫

'ಮೈಥಿಲಿ' ಯಲ್ಲಿ ಶೈಲ ನಿಂತು, ಉದ್ಯೋಗ ಮುಂದುವರಿಸಿದ. ಹೇಮಂತರ ಹಿರಿಮೆಯ ಜೀವನ, ಶೈಲೇಂದ್ರನಂತಹ ಸ್ವಾತಂತ್ರ್ಯಪ್ರಿಯನಿಗೆ ಮಾದರಿಯಾಯಿತು. 'ನೀನು ರಂಗೂನಿನಲ್ಲಿರುವವರೆಗೆ ಯಾರಲ್ಲಿಯೂ ವಿರೋಧ ತೋರಬೇಡ! ನಿನಗೆ ಸಹಿಸದ ಅನೇಕ ವಿಷಯಗಳು ನಡೆಯುತ್ತವೆ. ಆ ಸಮಯದಲ್ಲಿ ತಾಳ್ಮೆಯಿಂದಿರಬೇಕು; ಒಮ್ಮೆಯೇ ವಿರೋಧ ಪ್ರದರ್ಶನ ಮಾಡಬಾರದು' ಎಂದು ಹೇಮಂತರು ಶೈಲನಿಗೆ ಎಚ್ಚರಿಕೆ ಹೇಳುತ್ತಿದ್ದರು. ವಿಶೇಷ ಮಾರ್ಪಾಡಿಗೆ ಸಿಕ್ಕದೆ, ಶೈಲ ಇರತೊಡಗಿದ.

'ಮೈಥಿಲಿ' ಯಲ್ಲಿ ಗ್ರಂಥ ಸಂಪತ್ತು ಹೇರಳವಾಗಿರಲಿಲ್ಲ. ಭಾಷಾಧ್ಯಾಪಕರಿಗೆ ಬೇಕಾಗುವಂತಹ ಗದ್ಯ, ಪದ್ಯ, ಇತಿಹಾಸ ಗ್ರಂಥಗಳೇ ನಿಧಿಯಾಗಿದ್ದವು. ವಿದ್ಯಾನಿಧಿಯಾಗಿ ಹೇಮಂತರೇ ಚರ್ಚೆಗೆ ಕೂಡುತ್ತಿದ್ದು, ಜ್ಞಾನಾರ್ಜನೆಗೆ ಕಾರಣರಾಗುತ್ತಿದ್ದರು. ನಿರ್ಜೀವ ಗ್ರಂಥರಾಶಿಗೆ ಶೈಲ ಆಶೆಪಡಲಿಲ್ಲ. ಕೊರಗಲೂ ಇಲ್ಲ.

'ಇಲಾಖೆಯ ಕೆಲಸ ಮುಂದೆ ನನಗೆ ಬೇಡವೇ ಬೇಡ!' ಎಂದು ಒಮ್ಮೆ ಹೇಮಂತರೊಂದಿಗೆ ಹೇಳಿಕೊಂಡ. 'ಇಡೀ ಒಂದು ಭೂವಸತಿಯ ಆಡಳಿತವನ್ನು ವಹಿಸಿದರೆ ಸಾಕೆಂದು ನೀನು ತೃಪ್ತಿ ಪಡುತ್ತಿದ್ದಿಯೇ; ಅನುಭವವಾಗಿ ಕರ್ತವ್ಯಭಾರವನ್ನು ವಹಿಸಲು ಸಮರ್ಥನಾದ ಮೇಲಲ್ಲವೇ? ಆ ಮಾತು!' ಎಂದು ಪ್ರತಿಯಾಗಿ ಹೇಮಂತರು ನುಡಿದರು. ಅವರು ಹೇಳುತ್ತಿರುವುದು ಸರಿಯೆ! ಅಧಿಕಾರ, ವೈಷಮ್ಯ ಗೊಡವೆಯಿಂದೇನು? ಫಲವತ್ತಾದ ಸ್ವಾತಂತ್ರ್ಯ

ಭೂಮಿಯಿರಬೇಕು, ನಿರ್ಭಯವಾಗಿ ಅಲ್ಲಿ ಕೆಲಸ ಮಾಡಬಹುದು ಎಂದು ಶೈಲ ಕನಸು ಮಂದಿರದಲ್ಲಿಯೇ ಎಣಿಸುತ್ತಿದ್ದ.

ಒಂದು ಬಾರಿ ಹೇಮಂತರು ಶೈಲನೊಂದಿಗೆ-ಚರ್ಚೆಗೆ ಕೂತರು. ಚರ್ಚೆ ದೀರ್ಘವಾಗಿಯೇ ಬೆಳೆಯಿತು. 'ದ್ವೇಷ, ಅಪ್ರಿಯತೆ' ಮುಂತಾದ ಮಾತುಗಳಿಂದ 'ದ್ವೇಷಾಸೂಯೆ' ಯ ವಿಚಾರ ವಿಮರ್ಶೆಗೆ ಬಂತು: 'ಈಬೇಗೆ ಒಂದು ಇಲಾಖೆಗೆ ಸಂಬಂಧಿಸಿಲ್ಲ. ಎಲ್ಲೆಲ್ಲಿಯೂ ಸುಳಿದಿದೆ. ನಾವು ಎಲ್ಲವನ್ನೂ ಸುಧಾರಿಸಿಕೊಳ್ಳಬೇಕು, ತಾಳ್ಮೆಯಿಂದಿರಬೇಕು, ಇಲ್ಲದಿದ್ದಲ್ಲಿ ; ನಾಶವಾಗುವೆವು' ಎಂದು ಶೈಲನಿಗೆ ಬೋಧನೆ ಮಾಡಿದರು.

'ಕೆಲವು ವರ್ಷಗಳಿಂದ ರಾಜಕೀಯ ಆಂದೋಲನ ಬೆಳೆಯುತ್ತಿದೆ. ಬ್ರಹ್ಮದಲ್ಲಿ ಅದು ಅಷ್ಟು ಪ್ರಸರಿಸಿಲ್ಲ. ಅಂಜುಗುಳಿ ನಮ್ಮನ್ನು ಪೂರ ಬಿಟ್ಟಿಲ್ಲ. ಹುರುಳಿಲ್ಲದ ಹರಟೆಯಲ್ಲಿ ನಾವು ಕಾಲ ಕಳೆಯುತ್ತಿದ್ದೇವೆ. ರಾಜಕೀಯ, ರಾಷ್ಟ್ರೀಯದ ಬೆಲೆ ನಮಗೆ ಹೇಗೆ ನಿಶ್ಚಯವಾಗಬೇಕು? ನಮ್ಮ ದೌರ್ಬಲ್ಯವೇ ವ್ಯಕ್ತಿತ್ವದ ಬೆಲೆಯನ್ನು ಕಡಿಮೆಮಾಡಿದೆ' ಎಂದು ಹೇಮಂತರು, ವ್ಯಕ್ತಿ ವೈಶಿಷ್ಟ್ಯದ ಮಾತು ಬೆಳೆಸಿದರು.

'ಹಲವಾರು ಜ್ಯೋತಿ ಮುಂದೆಬಂದು, ಸರಳತೆ, ಸ್ವಾರ್ಥತ್ಯಾಗ, ಭೂತದಯೆ, ಕರ್ತವ್ಯನಿಷ್ಠತೆಯನ್ನು ತೋರಿತು, ಈಗ ನಾವು ಎಚ್ಚೆತ್ತಿದ್ದೇವೆ, ವ್ಯಕ್ತಿತ್ವದ ಬೆಲೆಯನ್ನು ಅರಿಯುತ್ತಿದ್ದೇವೆ.'

'ಅರಿಯಲು ಕಾರಣವಿಷ್ಟೆ: ಆದಿಯಾಗಿ ವ್ಯಾಸಂಗದಲ್ಲಿದ್ದಾಗ ಅಧ್ಯಾಪಕರು ನಮ್ಮನ್ನು, ಧರ್ಮ, ನೈತಿಕ ದೃಷ್ಟಿಯಲ್ಲಿಯೇ ನಿಲ್ಲಿಸಿದ್ದರು. ನಮ್ಮ ಕಿವಿಗೆ ಆಗ ರಾಜಕೀಯ, ರಾಷ್ಟ್ರಾಭಿಮಾನದ ಹೆಸರು ಕೇಳಿಬರುತ್ತಿರಲಿಲ್ಲ. ನಮ್ಮದೂ ಒಂದು ಜೀವ, ನಮ್ಮದೂ ಒಂದು ರಾಷ್ಟ್ರ, ನಮಗೂ ಸಂಸ್ಕೃತಿಯಿದೆಯೆನ್ನುವ ಭಾವ ತಳೆದೆವು. ಈ ಅಭಿಮಾನ ತಾಳಿದಾಗಲೇ ವ್ಯಕ್ತಿತ್ವದ ಬೆಲೆ ನಮಗೆ ಅನುಭವವಾಯಿತು'

ಮಾತಿನ ಸರಣಿ ಮುಗಿಯಲಿಲ್ಲ, ಮುಂದೋಡಿತು. 'ರಾಜಕೀಯದಂತಹ ಜಟಿಲ ಸಮಸ್ಯೆ ಬೇರೆಯಿಲ್ಲ, ಶೈಲಾ! ಉದ್ಬೋಧಕ ಬೆಳೆದಾಗ, ಯುವಕಸ್ತೋಮ ಆಕರ್ಷಣೀಯವಾದ ಮಹತ್ವಕ್ಕೆ ಆಶೆಪಟ್ಟಿತು. ರಾಷ್ಟ್ರಾಭಿಮಾನದಿಂದ ಅವರು

ರಾಜ್ಯಕ್ರಾಂತಿಗೆ ನುಗ್ಗಿದರು. ಅಭಿಮಾನದ ವಿಚಾರ ಮಾತಿನಿಂದಲೂ ಬರಹದಿಂದಲೂ ಪ್ರಚಾರವಾಗುತ್ತ ಬಂದಾಗ, ಯುವಕರ ದೃಷ್ಟಿ ಬೇರೆ ಹರಿಯಿತು. ಒಳಜಗಳ ಆರಂಭವಾಗಿ ಅದರಿಂದ ಸಂಘಟನ ಶಕ್ತಿ ಸಡಲಿತು. ಭಾರತದಲ್ಲಿಯೇ ಹೀಗಿದೆ; ಬ್ರಹ್ಮದಲ್ಲಿ ಕೇಳಬೇಕೆ?' ಎಂದು ಹೇಮಂತರು ಮುಗಿಸಿದರು.

ಮಹೇಶ ಮಾಂಡಲೆಯಿಂದ ರಂಗೂನಿಗೆ ಬಂದ, ಶೈಲನನ್ನು ಕಂಡು, ಕಲ್ಕತ್ತೆಗೆ ಹೋಗುವದನ್ನು ತಿಳಿಸಲು 'ಮೈಥಿಲಿ' ಪ್ರವೇಶಿಸಿದ. ನಿರುದ್ಯೋಗಿ, ಇನ್ನೂ ತನಗೆ ಬೆಳಗಾಗಿಲ್ಲವೆಂದು ಪುನಃ ಗಟ್ಟಿಯಾಗಿಹೊದ್ದು ಕೊಂಡು ಮಲಗುವ ಸಂಪ್ರದಾಯದವರಂತೆ, ಅವನು ಕಣ್ಣು ಮುಚ್ಚಿದ್ದ. ಕಾಯಿದೆ ಕಾನೂನು ಶಾಸ್ತ್ರ ಕಲಿಯುವುದು ಅವನಿಗೆ ಬೇಕಾಗಿರಲಿಲ್ಲ. ಮಾಂಡಲೆಯಲ್ಲಿ ನಿಂತು ಪ್ರಯೋಜನವೇನೂ ಕಾಣದವನು ರಂಗೂನಿಗೆ ಬಂದಿದ್ದ.

ಉತ್ಸಾಹದಿಂದ ಶೈಲಾ ಅಂದು ಹೇಮಂತರೊಂದಿಗೆ ಮಾತನಾಡುತ್ತಾ ಗುಂಪು ಮರಗಳ ನಡುವೆ ಕುಳಿತಿದ್ದ. ಸಂಭಾಷಣೆ, ತೀವ್ರಗತಿಯಲ್ಲಿ ಮುಂದೋಡುತ್ತಿದ್ದ ಯುವಕನ ಸಾಹಸದ ಮಾತೇ ಆಗಿದ್ದಿತು. ನನ್ನ ವಿಷಯವನ್ನೇ ಕುರಿತು ಮಾತನಾಡುತ್ತಿದ್ದಾರೆಂದು ಮಹೇಶ ಅರಿತುಗೊಂಡ. ಶೈಲನ ಸಮೀಪಕ್ಕೆ ಬಂದು ನಿಂತು 'ಮೈಥಿಲಿ' ಯನ್ನು ಮತ್ತೆ ಪ್ರವೇಶಿಸಬೇಕಾಯಿತು' ಎಂದ. ಹೇಮಂತರು ಮಹೇಶನನ್ನು ಕೂಡಿಸಿಕೊಂಡು 'ನೀನು ಬಹು ದಿನದ ಮೇಲೆ ಇಲ್ಲಿಗೆ ಬರುತ್ತಿದ್ದೀಯೆ!' ಎಂದು ಮಾತನಾಡಿಸಿದರು. ಅಬುಜದತ್ತರು ಮಹೇಶನಿಗೆ ಯೂರೋಪಿಗೆ ಹೋಗಲು ಅನುಮತಿ ಕೊಟ್ಟರೋ ಅಥವಾ ನಿರಾಕರಿಸಿದರೋ ತಿಳಿಯಲು ಶೈಲ, 'ನಿನಗೆ ಅನುಮತಿ ಸಿಕ್ಕಿತೇ ಮಹೇಶ' ಎಂದು ಕೇಳಿದ. ನೇರವಾಗಿ ಮಹೇಶ 'ನಾನು ಪಡೆಯಬೇಕೆಂದಿರುವ ಶಿಕ್ಷಣ ಯಾವುದೆಂದು ನಿನಗೆ ತಿಳಿದಿದೆ, ಪುರಸ್ಕಾರ ಮಾತ್ರ ದೊರೆಯಲಿಲ್ಲ' ಎಂದು ಹೇಳಿ ಕ್ಷೀಣನಾಗಿ ಮೌನ ತಾಳಿದ.

ಅಬುಜದತ್ತರನ್ನು ಮಹೇಶ ಕಾಣಲು ಹೋದ ಸಂಗತಿ ಹೇಮಂತರಿಗೆ ಗೊತ್ತಾಗಿದ್ದಿತು. ಅನುಮತಿ ಕೊಡಲಿಲ್ಲವೆಂಬ ವಿಷಯವನ್ನು ಅವನಿಂದಲೇ ಕೇಳಿ ತಿಳಿದುಕೊಂಡರು. ಮಹೇಶನ ಹೊಸ ಆಶೆಯಲ್ಲಿ, ಆಸಕ್ತಿಯಲ್ಲಿ ಸ್ವಲ್ಪವೂ ಒಳ್ಳೆಯದನ್ನು ಕಾಣದ ಶೈಲ 'ಶೀರ ಅನಾಗರೀಕರಿಂದ ಹಿಡಿದು ಅತ್ಯಂತ ನಾಗ

ರೀಕನೆನಸಿಕೊಳ್ಳುವವನಿಗೂ-ತಲತಲಾಂತರಗಳಿಂದ ಬಿಡದೆ ಅಂಟಿಕೊಂಡಿರುವ ಒಂದೇ ಒಂದು ದುರ್ಗುಣವೆಂದರೆ ಮೂಢನಂಬಿಕೆ!' ಎಂದು ಮೊದಲು ಮಾಡಿದ.

ಆರಂಭದಲ್ಲಿಯೇ ಉತ್ಸಾಹಿಗೆ ಅವಹೇಳನ ಮಾಡುತ್ತಿದ್ದ ಶೈಲನೊಂದಿಗೆ ಹೇಮಂತರೂ ಜತೆಗೂಡಿದರು

'ಭೂಮಿ ಚಪ್ಪಟೆಯಾಗಿದೆ, ಸೂರ್ಯನು ಸುತ್ತಲೂ ತಿರುಗುತ್ತಿದ್ದಾನೆ' ಎಂದು ಭ್ರಮಿಸುವ ಬಿ. ಎ. ಎಂ. ಎ. ಗಳಿರುವಾಗ ಮಿಕ್ಕವರ ಪಾಡೇಕೆ?' 'ವಿದ್ಯಾಲಯದಿಂದ ಪದವೀಧರರಾಗಿ ಗಂಡುಗಲಿಗಳೆಂದು ಹೊರಬಿದ್ದವರೆಲ್ಲರೂ ಮೂಢನಂಬಿಕೆಯಿಂದ ಪೂರ್ಣ ಪಾರಾದರೆಂದು ನಾನು ನಂಬುವುದಿಲ್ಲ' ಎಂದ ಶೈಲ.

'ಎಷ್ಟೋ ಮಂದಿ ನನ್ನ ಕಣ್ಣು ಮುಂದೆ ಪದವೀಧರರಾಗಿ ಹೊರಟುಬಿದ್ದರು, ಅವರಲ್ಲಿ ಅನೇಕರು ಪುರೋಗತಿಯನ್ನು ಕಾಣಲಿಲ್ಲ. ಪ್ರಗತಿಯೊಂದು ಹಿಡಿದ ಹಾದಿ ಅನೇಕ ಅಡ್ಡಹಾದಿ, ಸೀಳುಹಾದಿ ಕಂಡಿತು.' ಎಂದರು ಹೇಮಂತರು.

ಹೇಮಂತರ-ಶೈಲನ ಮಾತು ಕೇಳಿದ ಮಹೇಶ, ನನ್ನನ್ನು ಇಬ್ಬರೂ ಸೇರಿ ಅಲ್ಲಗಳೆಯುತ್ತಿದ್ದಾರೆ; ಅವಮಾನ ಪಡಿಸುತ್ತಿದ್ದಾರೆ ಎಂದುಕೊಂಡ. ನಿಜವಾಗಿ ಅಂದಿನ ಮಾತಿನಲಹರಿ ಅವನಿಗೂ ಅನ್ವಯಿಸತಕ್ಕದಾಗಿತ್ತು. ಹೀಗೆ ಚುಚ್ಚಿ ನುಡಿಯುವ ಬದಲು ನೇರವಾಗಿಯೇ ಹೇಳಬಹುದಾಗಿತ್ತಲ್ಲ ಎಂದು ನೊಂದು ಕೊಂಡ.

'ಶೈಲಾ! ಉದಾಹರಣೆಗೆ ನೋಡು! ಕೈಗಾರಿಕೆಯ ವಿಷಯ ಒತ್ತಟ್ಟಿಗಿರಲಿ, ನಿನ್ನ ವಿಷಯವನ್ನೇ ತೆಗೆದುಕೊಳ್ಳುವೆ; ಭಾರತವು ಎಂದಾದರೂ ಕೃಷಿಕರ ಭೂಮಿಯೇ ತಾನೆ? ಕೈಗಾರಿಕೆಗೆ ಪ್ರೋತ್ಸಾಹ ಕೊಡುವುದು ಹಾಗಿರಲಿ, ಆಡಳಿತಗಾರರು ಎಷ್ಟು ಕೃಷಿ ಶಾಲೆಗಳನ್ನೂ ಕಾಲೇಜುಗಳನ್ನೂ ಆರಂಭಿಸಿದ್ದಾರೆ ಹೇಳು?' ಎಂದು ಹೇಮಂತರು ಮಾತನಾಡಿದರು.

'ಸ್ವಾರ್ಥಪಂಥದವರಿಂದ ನಮಗೆ ಸಿಕ್ಕುವುದೇನು? ಲಭ್ಯವಾಗುವುದು ಸ್ವಲ್ಪವೇ'

ತಾನೇಕೆ? ಈ ವಾದದಲ್ಲಿ ಪ್ರವೇಶಿಸಬಾರದೆಂದು ಮಹೇಶ—'ಶೈಲಾ! ನೀನು ಇಷ್ಟು ಹೇಳುತ್ತಿದ್ದಿಯೇ! ರಾಷ್ಟ್ರ ಸ್ವಾತಂತ್ರ್ಯ ಪಡೆದ ಮೇಲಲ್ಲವೇ ಆ ಮಾತು' ಮುಂಚೆಯೇ ಈ ಸೌಲಭ್ಯಗಳೆಲ್ಲ ಹೇಗೆ? ದೊರೆಯುವುದು' ಎಂದ.

'ಭಾರತಕ್ಕೆ ಸ್ವಾತಂತ್ರ್ಯ ಸುಮ್ಮನೆ ಬರುತ್ತದೆಯೆಂದು ತಿಳಿದೆಯೇನು? ರಾಷ್ಟ್ರಪ್ರೇಮಿಗಳು ಮೂಲಾಧಾರವಾಗಿ ನಮ್ಮನ್ನು ಎತ್ತಿಹಿಡಿದು, ಅಜ್ಞಾನವನ್ನು ಕಳೆದು, ವಿಚಾರವಂತರಾಗಿ ಮಾಡುವವರೆಗೆ ಸಾಧ್ಯವಿಲ್ಲ! ನೀನೇ ಯೋಚಿಸು, ಭಾರತ ಸರ್ಕಾರ ಕೃಷಿಕರಿಗೆ ಹೆಚ್ಚು ಪ್ರೋತ್ಸಾಹ ನೀಡಬೇಕೋ ಅಥವಾ ಸೈನ್ಯ ಶಾಖೆಗೆ ಹೆಚ್ಚುಹಣ ವೆಚ್ಚ ಮಾಡಬೇಕೋ?' ಎಂಬ ಪ್ರತಿವಾದ ಶೈಲ ಹೂಡಿದ.

ಸಂಭಾಷಣೆ ಎಲ್ಲಿಗೆ ಬರುವುದು, ಏನೇನು ನಡಿಯುವುದು, ನೋಡುವುದೆಂದು ಹೇಮಂತರು ಸುಮ್ಮನಾಗಿದ್ದರು.

'ಸೈನ್ಯ ಶಾಖೆ, ಭಾರತವನ್ನು ರಕ್ಷಿಸುತ್ತಿಗುವುದರಿಂದ ಅಷ್ಟು ಹಣವನ್ನು ವೆಚ್ಚಮಾಡುತ್ತಿದೆ' ಎಂದು ಮಹೇಶ, ಶೈಲನ ಪ್ರಶ್ನೆಗೆ ಉತ್ತರವಿತ್ತ.

'ಸೈನ್ಯವನ್ನು ಎತ್ತಿಹಿಡಿದು ಖರ್ಚುಮಾಡಿ, ಭಾರತವನ್ನು ರಕ್ಷಿಸುತ್ತಿರುವರೆಂದು ಹೇಳುತ್ತಿರುವ ಆಡಳಿತಗಾರರು ಸೋಗು ಹಾಕಿದಾರೆ. ನೀನೂ ಅವರನ್ನು ನಂಬಿ ನುಡಿಯುತ್ತಿರುವುದು ಸರಿಯಲ್ಲ!' ಎಂದು ಶೈಲ ಮಹೇಶನ ಮಾತಿಗೆ ಗಹಿಗಹಿಸಿ ನಗಲಾರಂಭಿಸಿದ. ಮಹೇಶನ ಮುಖ ಕಳೆಗುಂದಿತು.

'ರಾಷ್ಟ್ರ ಬಲಯುತವಾಗಬೇಕಾದರೆ, ಜನರು ಸುಖವಾಗಿ ಬಾಳಬೇಕೆಂದಿದ್ದರೆ ಕೈಗಾರಿಕಾ ಪ್ರಸಾರದಿಂದಲ್ಲದೆ ಸಾಧ್ಯವಿಲ್ಲ! ವ್ಯವಸಾಯದಲ್ಲೂ ಉಪಕರಣಗಳನ್ನು ಉಪಯೋಗಿಸಿದಲ್ಲದೆ, ಜನತೆಯ ಹೊಟ್ಟೆಯನ್ನು ತುಂಬಿಸಲು ಸಾಧ್ಯವಿಲ್ಲದ ಮಾತು! ರಾಷ್ಟ್ರಯೋಜನೆಯ ಮತ್ತಿತರ ಅಂಗವಾಗಿ ಸಾಮಾನ್ಯ ವಿದ್ಯಾಭ್ಯಾಸ, ಔದ್ಯೋಗಿಕ ವಿದ್ಯಾಭ್ಯಾಸ ಪ್ರಸರಣೆ, ಮನೋರಂಜನೆಗೆ ಕಲೆಯ ಪ್ರೋತ್ಸಾಹ, ನೆಮ್ಮದಿಗೆ, ಆರೋಗ್ಯರಕ್ಷಣೆ ಮುಂತಾದ ಕಾರ್ಯಗಳು ನಡೆದಿವೆಯೇ? ಯೋಚಿಸು ನೋಡು ಮಹೇಶ!' ಎಂದರು ಹೇಮಂತರು.

'ರಾಷ್ಟ್ರದ ಆದಾಯವೆಲ್ಲಾ ಸೈನ್ಯಶಾಖೆಯ ರಕ್ಷಣೆಗೇ ವೆಚ್ಚವಾಗುತ್ತಿರುವಾಗ, ಮಿಕ್ಕೆಲ್ಲ ಸೌಲಭ್ಯಗಳು ಹೇಗೆ? ನಮಗೆ ದೊರೆತೀತು! ಸರ್ಕಾರ ಮಿಕ್ಕೆಲ್ಲವನ್ನೂ ಅಲಕ್ಷ್ಯದಿಂದ ನೋಡುತ್ತಿದೆ' ಎಂದ ಶೈಲಾ.

'ಲಾಭವನ್ನೇ ತಮ್ಮ ಮುಖ್ಯ ಗುರಿಯನ್ನಾಗಿಟ್ಟುಕೊಂಡು, ನಮ್ಮನ್ನು ಆಳುತ್ತಿರುವವರು; ಖಾಸಗೀ ಉದ್ಯೋಗವನ್ನು ಕ್ರಮವಾಗಿ ನಾಶಪಡಿಸುತ್ತಿ

ದ್ದಾರೆ! ನಾವು ಎಲ್ಲವನ್ನೂ ಸರ್ಕಾರದಿಂದಲೇ ಅಪೇಕ್ಷಿಸಲಾಗದು; ಹಾಗೆ ಮಾಡುವುದು ಮರಳುಗಾಡಿನಲ್ಲಿ ನೀರು ಹುಡುಕಿ ಹೋದಂತೆಯೇ ಸರಿ!' ಎಂದು ಹೇಮಂತರು ಅಂದಿನ ಚರ್ಚೆ ಮುಗಿಸಿದರು.

೭

ಪ್ರೊಫೆಸರ್ ಹೇಮಂತರನ್ನು ಕಾಣಲು, ಕೆಲವು ವಿದ್ಯಾರ್ಥಿಗಳು 'ಮೈಥಿಲಿ' ಪ್ರವೇಶ ಮಾಡಿದರೆಂಬ ವಾರ್ತೆ ಮುಟ್ಟಿತು. ಶೈಲ-ಮಹೇಶನನ್ನು ಬಿಟ್ಟು ಅವರು, ಬಂಗಲೆಯೊಳಗೆ ಹೊರಟು ಹೋದರು. ವಿಚಾರತರಂಗದಲ್ಲಿ ಮುಳುಗಿದ ಗೆಳೆಯರಿಬ್ಬರು ಎಚ್ಚೆತ್ತು ಹೊರಬಿದ್ದರು.

ನನ್ನ ಹಂಬಲ ಮೊಳಕೆ ಒಡೆದು ಸಸಿಯಾಗಿ, ಮರವಾಗಿ ಬೆಳೆಯಬೇಕಾನುದಕ್ಕೆ ವಜ್ರಘಾತವಾಯಿತು, ಎಂದು ಮಹೇಶನಿಗೆ ಹೃದಯವೇದನೆಯಾಯಿತು. ಪ್ರಥಮಪಥದಲ್ಲಿ ವತ್ತರೊಬ್ಬರಲ್ಲದೆ, ಶೈಲ-ಹೇಮಂತರೂ ಅಡ್ಡಿ ಮಾಡುತ್ತಿದ್ದಾರೆ! ಅವರ ಮಾತಿನಸರಣಿಯೂ ಹಾಗೆಯೇ ಇದೆ ಎಂದು ಮಹೇಶ ತಿಳಿದ.

'ಸ್ವಾರ್ಥ! ಸ್ವಾರ್ಥ! ಜಗತ್ತೆಲ್ಲವೂ ಸ್ವಾರ್ಥಮಯವೇ ಆಗಿದೆ. ಪ್ರತಿಯೊಬ್ಬನೂ ಒಂದು ರೀತಿಯಲ್ಲಿ ಸ್ವಾರ್ಥ ಸಾಧಿಸಿಕೊಳ್ಳುತ್ತಿರುತ್ತಾನೆ. ಶೈಲ-ಸ್ವಾರ್ಥ ಸಾಧಕರಿಂದ ಜಾಗರೂಕರಾಗಿರಿ ಎಂದು ಬೋಧಿಸುತ್ತಿದ್ದಾನೆ! ಸ್ತುತಿ ಸ್ತೋತ್ರಗಳಿಗೆ ಮರುಳಾಗಿ ಆತ್ಮನಾಶ ಮಾಡಿಕೊಳ್ಳಬೇಡಿ! ಎಂಬ ಎಚ್ಚರಿಕೆಯ ಮಾತು ನನಗೆ ಬೇಡ! ಇರಲಿರಲಿ, ನನಗೂ ಅವಕಾಶ ಸಿಕ್ಕುತ್ತದೆ' ಎಂದುಕೊಂಡ ಮಹೇಶ.

ರಂಗೂನಿನಲ್ಲಿ ನಿಲ್ಲುವ ಮನಸ್ಸಿಲ್ಲದೆ ಮಹೇಶ, ಕಲ್ಕತ್ತೆಗೆ ಹೊರಡುವ ನಿರ್ಧಾರವನ್ನು ಶೈಲನಿಗೆ ತಿಳಿಸಿದ.

'ನೀನು ಕಲ್ಕತ್ತೆಗೆ ಹೋಗುತ್ತೀಯೆ, ವತ್ತರು ಮಾಂಡಲೆಯಲ್ಲಿರುತ್ತಾರೆ; ನಾನು ಇಲ್ಲಿಯೋ ಅಥವಾ ಮತ್ತೆಲ್ಲಿಯೋ ಇರುತ್ತೇನೆ. ಹೀಗೆ ಎಲ್ಲರೂ ಬೇರೆ ಬೇರೆಯಾಗಿ ಹೋಗುತ್ತಿರುವೆವಲ್ಲ ಎಂದು ಮನಸ್ಸು ಪೀಡಿಸುತ್ತಿದೆ'

'ಭಾರತ-ಬ್ರಹ್ಮ ಬಹಳ ದೂರವಿರುವುದಿಲ್ಲ ಶೈಲಾ! ನಿನ್ನ ಭೇಟಿ ಮಾಡುತ್ತಲೇ ಇರುತ್ತೇನೆ. ನಾವುಗಳು ವೃತ್ತಿಗಾಗಿ ನಿರ್ವಾಹವಿಲ್ಲದೆ ಬೇರೆಯಾಗಬೇಕು' ಎಂದು ಮಹೇಶ ಶೈಲನಿಗೆ ಸಮಾಧಾನ ಹೇಳಿದ.

'ಈ ಬಡಜೀವಿಯನ್ನು ಮಾತ್ರ ಖಂಡಿತ ಮರೆಯಬೇಡ! ಮಹೇಶ!' ಎಂದು ತನ್ನ ಅಳಲನ್ನು ತಡೆದು ಶೈಲಾ, ಮಹೇಶನನ್ನು ನಿಲ್ದಾಣಕ್ಕೆ ಕಳುಹಿಕೊಟ್ಟ.

'ಮರೆಯುವದೆಂದರೇನು? ಶೈಲಾ! ಮತ್ತೆ ಬರುವವನಿದೇನೆ. ಯೋಚನೆ ಮಾಡಬೇಡ!' ಎಂದು ಮಹೇಶ ದೂರವಾದ.

೮

ನಾನಿರುವುದು ಒಬ್ಬ. ಪ್ರಭಾ ಕಟಕ್ ನಗರದಲ್ಲಿದ್ದಾಳೆ. 'ಮೈಥಿಲಿ' ಯಲ್ಲಿ ನೆರಳಾಗಿ ನಿಲ್ಲಲು ಯಾರೂ ಇಲ್ಲ. ಶೈಲಾ ನನ್ನೊಂದಿಗೆ ಇದ್ದಾನೆ! ಆದರೆ ಎಷ್ಟು ದಿನ? ಇಲಾಖೆಯವರು ಅವನನ್ನು ವರ್ಗಾಯಿಸಿದರಾಯಿತು, ಗಂಟು ಮೂಟೆ ಕಟ್ಟುತ್ತಾನೆ. ಇಳಿಗಿಳಿದು ಬರುವವರೂ ಒಬ್ಬರೇ ಹಿಂದಿರುಗಿ ಹೋಗುವವರೂ ಒಬ್ಬರೇ ಆಗಿರುವಾಗ, ಚಿಂತಿಸಲು ಕಾರಣವಿಲ್ಲವೆಂದು ಹೇಮಂತರು ನೆನೆದರು. ಪ್ರಭಾ 'ಮೈಥಿಲಿ' ಯಲ್ಲಿಯೇ ನಿಂತಿದ್ದರೆ, ಅವರಿಂದ ಈ ಮಾತು ಹೊರಡುತ್ತಿರಲಿಲ್ಲ. ಅವಳ ಬದಲಾಗಿ ಶೈಲ ಇದ್ದಾನೆ! ಕಳೆದಷ್ಟು ದಿನ ಕಳೆಯಲಿ ಎಂದು ತೃಪ್ತರಾದರು.

ಇಲಾಖೆಯ ಕೆಲಸ ಶೈಲನಿಗೆ ತೀರ ಹಗುರವಾಗಿತ್ತು. ಹೇಮಂತರಿಗೆ ಒಂದೆರಡು ಘಂಟೆ ಕಾಲವೇ ಕಾಲೇಜಿನಲ್ಲಿ ಉಪನ್ಯಾಸ ಕೊಡುವ ಪದ್ಧತಿಯಿದ್ದುದರಿಂದ ಅವರು ಮುಗಿದೊಡನೆಯೇ 'ಮೈಥಿಲಿ' ಗೆ ಬರುತ್ತಿದ್ದರು. ನಮ್ಮ ಪ್ರಾಂತೀಯದವನೇ ಆದವನೊಬ್ಬನಿಗೆ ಪರನಾಡಿನಲ್ಲಿ ಆಶ್ರಯಕೊಡುವ ಸುಯೋಗ ಸಿಕ್ಕಿತಲ್ಲಾ ಎಂಬ ಹೆಮ್ಮೆಯಿಂದ ಅವರು, ಶೈಲನನ್ನು ಪ್ರೀತಿಯಿಂದ ಕಾಣುತ್ತಿದ್ದರು.

'ಮೈಥಿಲಿ' ಯಲ್ಲಿ ಕಣ್ಣುಮನಗಳನ್ನು ಆಕರ್ಷಿಸಿ ಪರಿಮಳವನ್ನು ಬೀರಿ ತೂರುವಂತಹ ಹೂಗಿಡಗಳಿರಲಿಲ್ಲ. ಬಂಗಲೆಯಲ್ಲಿ ಸೇವಕರಿದ್ದರೂ ಬೆಳೆಯುವ ಲಕ್ಷ್ಯ ಯಾರಿಗೂ ಇರಲಿಲ್ಲ. ಶೈಲ ಈ ವ್ಯವಸ್ಥೆಗೆ ಕೈಹಾಕಿದ. ಹೂಗಿಡಗಳನ್ನು ಬೆಳೆಯಲಾರಂಭಿಸಿದ. ಕೆಲವು ತಿಂಗಳಲ್ಲಿಯೇ 'ಮೈಥಿಲಿ' ಯಲ್ಲಿ ಹೂತೋಟ ಬೆಳೆದು ಸಮೃದ್ಧವನವಾಯಿತು. 'ಹೇರಳವಾಗಿ ಬೆಳೆದುದನ್ನು ಹೇಮಂತರು ಒಮ್ಮೆ ನೋಡಬಾರದೆ' ಎಂದು ಶೈಲ ಬಯಸುತ್ತಿದ್ದ. ಹೇಮಂತರು ದೃಷ್ಟಿ ಹರಿಸಲಿಲ್ಲ. ತೋಟದ ಬಗೆಗೆ ಒಂದು ಮಾತನ್ನೂ ಹೇಳಲಿಲ್ಲ. 'ಇರಲಿ, ಪುಷ್ಪಗಳು ಅವರ ಕಣ್ಣಿಗೆ ಬೀಳುವಂತೆ ಮಾಡುವೆ,' ಎಂದು ಶೈಲ, ಹೇಮಂತರು

ಇರುತ್ತಿದ್ದ ಕೋಣೆಯ ಹೊರಭಾಗದಲ್ಲೆಲ್ಲಾ ಹೂಕುಂಡಗಳನ್ನಿಟ್ಟು; ಅವರ ದೃಷ್ಟಿಗೆ ಬೀಳುವಂತೆ ಮಾಡಿದ. ಹೂ ಸೊಬಗನ್ನು ಕಂಡ ಹೇಮಂತರಿಂದ ಸೊಲ್ಲೊಂದೂ ಹೊರಬೀಳಲಿಲ್ಲ.

ಹೇಮಂತರಿದ್ದ ಕೋಣೆಯಲ್ಲಿ ಒಂದು ಮೇಜು, ಬಳಿಯಲ್ಲಿಯೇ ಒಂದು ಆಸನ, ಅದರ ಮೇಲೆ ಬೆಳಗುವ ದೀಪವಿತ್ತು. ಮೇಜಿನ ಮೇಲೆ ಸಾಮಾನ್ಯವಾಗಿ ಒಂದೆರಡು ಧರ್ಮಗ್ರಂಥಗಳಿರುತ್ತಿದ್ದವು. ಅವರು ಮನಃಪ್ರಕಾಶ, ಅಂತಸ್ಫೂರ್ತಿ ಅರಿಯಲು, ನಿತ್ಯವೂ ಒಂದು ಘಂಟೆ ಕಾಲ ಪ್ರಾರ್ಥನೆ ಮಾಡುತ್ತಿದ್ದರು. ಮೇಜಿನ ಎದುರಿಗೆ ನೇತುಹಾಕಿದ್ದ ಸಿದ್ಧಪುರುಷನನ್ನು ನೆನೆಯುತ್ತಾ ಪ್ರಾರ್ಥನೆ ಮಾಡುವುದು ಅವರ ನಿತ್ಯದ ಕೆಲಸವಾಗಿತ್ತು. ತತ್ವಜ್ಞಾನದ ಮೇಲೆ ಮನಸ್ಸಿಟ್ಟು, ಪ್ರಾರ್ಥನೆ ಸಲ್ಲಿಸಿ ಹೊರಬೀಳುವಾಗ, ಚಿತ್ರದ ತೇಜೋಮೇಲ್ಮೆ ಹೆಚ್ಚುತ್ತಿರುವುದನ್ನು ಕಾಣುತ್ತಿದ್ದರು. ಹೇಮಂತರ ಪ್ರಾರ್ಥನಾಪದ್ಧತಿಗೆ ಶೈಲನೂ ಮೆಚ್ಚಿದ್ದ. 'ಅವರ ಮೇಜಿನ ಮೇಲೆ ನಾನು ಬೆಳೆದ ಹೂಗಳನ್ನಿಟ್ಟು, ಸಿದ್ಧಪುರುಷನಿಗೆ ಅರ್ಪಿಸುವಂತೆ ಮಾಡುವೆ, ಬೆಳೆದುದು ಸಾರ್ಥಕವಾಗುವುದಲ್ಲದೆ, ರಂಜನೆಯೂ ಹೇಮಂತರಿಗೆ ಕಾಣುವುದು' ಎಂದು ಶೈಲ ಯೋಚಿಸಿದ. ಒಂದು ದಿನ ಜೊಗಸೆ ಹೂವು ಹಿಡಿದುಕೊಂಡು ಪ್ರಾರ್ಥನಾಮಂದಿರದ ಮೇಜಿನ ಮೇಲಿರಿಸಿ ಹೊರಬಿದ್ದ.

ಹೊತ್ತಿಗೆ ಸರಿಯಾಗಿ ಹೇಮಂತರು, ಮಂದಿರಸೇರಿದರು. ಉಜ್ವಲ ಪ್ರಕಾಶದ ಕೋಣೆಯಲ್ಲಿ ಬಣ್ಣ ಬಣ್ಣದ ಹೂಗಳು ಮೇಜಿನ ಮೇಲಿರುವುದನ್ನು ನೋಡಿದರು. ದೀಪ ಮಿನುಗಿದಂತೆ ಅವರ ಹೃದಯದ ಜ್ಯೋತಿ ಮಿನಿಗಿತು. ಎಂದಿನಂತೆ ಪ್ರವಚನ ಮುಗಿಸಿ, ಬಹಳ ಹೊತ್ತಿನ ಮೇಲೆ ಮಂದಿರದಿಂದ ಹೊರಬಿದ್ದರು. ಶೈಲ ಎಣಿಸಿದಂತೆ, ಬಣ್ಣದ ಹೂಗಳು ಸಿದ್ಧಪುರುಷನಿಗೆ ಅಂದು ಹೇಮಂತರಿಂದ ಅರ್ಪಿಸಲ್ಪಟ್ಟಿತು. ಕೋಣೆಯಲ್ಲಿ ಹೂ ತಂದಿಟ್ಟವರಾರೆಂದು ತಿಳಿಯಲು ಹೇಮಂತರಿಗೆ ಹೆಚ್ಚುಕಾಲ ಬೇಕಾಗಲಿಲ್ಲ.

ನಿತ್ಯದಂತೆ ಶೈಲ, ಬೆಳಗಿನ ವೇಳೆಯಲ್ಲಿ ಉದ್ಯಾನದ ಕೆಲಸದಲ್ಲಿದ್ದ. ಅವನ ಉತ್ಸಾಹವನ್ನು ಕಂಡು ಹೇಮಂತರು 'ಎಷ್ಟು ರಮ್ಯವಾಗಿ ಬೆಳೆಯುತ್ತಿದಾನೆ' ಎಂದು, ತಮ್ಮಲ್ಲಿಯೇ 'ಹೂವಿನ ವಿಷಯವಿರಲಿ' ಎಂದು ಬಂಗಲೆಯೊಳಗೆ ಹೊರಟರು.

ತೋಟದ ಕೆಲಸವನ್ನು ಮುಗಿಸಿಕೊಂಡು ಶೈಲಾ ಬಂದ. ಹೇಮಂತರು ಅವನಿಗಾಗಿ ಕಾಯುತ್ತ ಕುಳಿತಿದ್ದರು. ಭೋಜನವುಗಿಸಿ, ಕಾಲೇಜಿಗೆ ಹೋಗುವ ವೇಳೆ ಆಗಾಗಲೇ ಆಗಿತ್ತು. ಈ ವೇಳೆಯಲ್ಲಿ, ತೋಟದ ಮೇಲೆ ಗಮನಹರಿಸಿದ ಹೇಮಂತರು ಶೈಲನಿಗೆ ಅನೇಕಾನೇಕ ಪ್ರಶ್ನೆಹಾಕಿದರು. ಪ್ರಾರ್ಥನಾಮಂದಿರದಲ್ಲಿ ಅವನು ಹೂವನಿಟ್ಟುಬಂದ ಮಾತುಬಂತು. ಖಿನ್ನರಾಗಿ ಹೇಮಂತರು 'ನಿನ್ನ ಹೂದೋಟದ ಉತ್ಸಾಹಕ್ಕೆ ಅಡ್ಡಿ ಮಾಡುತ್ತಿಲ್ಲ, ನೀನು ಪ್ರಾರ್ಥನಾಮಂದಿರದಲ್ಲಿ ಹೂವನಿಟ್ಟು ಹೊರಟುಹೋದೆ; ಪುಷ್ಪವನ್ನು ದೇವರಿಗಲ್ಲದೆ ಮತ್ತಾರಿಗೆ ಅರ್ಪಿಸುವುದು? ನಿತ್ಯ ನೆಮ್ಮದಿ ಕಾಣುತ್ತಿದ್ದವ ನಾನು ನೋವನ್ನು ಕಂಡೆ; ಪ್ರಭಾ ಇಲ್ಲಿ ನಿಂತಿದ್ದರೆ ಹೀಗಾಗುತ್ತಿರಲಿಲ್ಲ.......!' ಎಂದು ಮರುಕದಿಂದ ನುಡಿದರು.

ಹೊಟ್ಟೆಯ ಪೂರೈಕೆ ನಡೆದಿತ್ತು. 'ಈ ಬಗೆಯೇನು?' ಎಂದು ಶೈಲ ಚಕಿತನಾದ. ಹೇಮಂತರು ತೋರಿಕೊಂಡ ಉದ್ಗಾರಕ್ಕೆ ಕಾರಣ ತಿಳಿಯದೆ ಮೂಕನಾಗಿ ಕುಳಿತಿದ್ದ. 'ಪ್ರಭಾ ಯಾರು? ಇಲ್ಲಿಲ್ಲ!' ಈ ಮಾತುಗಳೇನು? ನನಗೊಂದೂ ಅರ್ಥವಾಗದು, ಹೇಮಂತರನ್ನೇ ಎಲ್ಲಾ ವಿಷಯಗಳನ್ನು ಕೇಳುವುದು, ತಪ್ಪುನಡೆದಿದ್ದಲ್ಲಿ, ಮನ್ನಿಸುವಂತೆ ಬಿನ್ನವಿಸಿಕೊಳ್ಳುವುದು, ಎಂದು ಯೋಚಿಸಿದ. ಹೇಮಂತರಿಗೆ ನಾನು ಏನು ಕೇಡುಮಾಡಿದೆನೋ ಎಂಬ ಸಂದೇಹ ಶೈಲನನ್ನು ಬಾಧಿಸಿತು.

ಹೇಮಂತರು ಆರಹೊಟ್ಟೆ ಪೂರೈಕೆ ಮುಗಿಸಿ, ಕಾಲೇಜಿಗೆ ಹೊರಟರು. 'ಈ ಸಂಗತಿ ಈಗ ಬೇಡ, ಸಂಧ್ಯೆಗಿರಲಿ' ಎಂದು ಶೈಲಾ ಕಾರ್ಯಾಲಯಕ್ಕೆ ಹೊರಟ. ಕಾಲೇಜಿನಿಂದ 'ಮೈಥಿಲಿ'ಗೆ ಹಿಂದಿರುಗಿ ಬರುವಾಗ ಹೇಮಂತರು, ಮುಂಜಾನೆ ನಡೆದುಹೋದ ವಿಚಾರವನ್ನು ನೆನಪಿಗೆ ತಂದುಕೊಂಡರು. 'ಹೂವನಿಟ್ಟುಹೋಗಿ, ಪೂಜಿಸಲಿ ಎಂದು ಸೂಚನೆಕೊಟ್ಟವನಿಗೆ, ನನ್ನ ಸಂತೋಷತಿಳಿಸದೆ ಬದಲಾಗಿ ದುಃಖತೋಡಿಕೊಂಡೆ. ಶೈಲ ಏನೆಂದು ಭಾವಿಸಿದನೋ' ಎಂದ. ಆಲೋಚಿಸುತ್ತಾ 'ಮೈಥಿಲಿ'ಗೆ ಬಂದರು. ತಂಬೆಳಕಿನ ಸಂಧ್ಯೆಯಲ್ಲಿ ಚರ್ಚೆಗೆ ಕೂತಾಗ, ಸಮಾಧಾನ ಮಾಡಲು ಯತ್ನಿಸಿದರು. 'ಹೂವಿನ ವಿಷಯವಾಗಿ ಎಲ್ಲಿಯವರೆಗೂ ಎಳೆಯಿತು' ಎಂದರು.

'ನನ್ನಿಂದ ಏನಾದರೂ ಅಪಚಾರ ನಡಿದಿದ್ದರೆ ಕ್ಷಮೆ ಬೇಡುತ್ತೇನೆ' ಎಂದ ಶೈಲ ಎದ್ದು ನಿಂತ.

'ನಿನ್ನಿಂದ ಎನು? ಅಪರಾಧವಾಯಿತು! ಹಾಗೇನೂ ಇಲ್ಲ, ನೀರೆರೆದು ಪೋಷಿಸಿ ತಂದ ಹೂವು ಸಿದ್ಧಪುರುಷನಿಗಲ್ಲದೆ ಮತ್ತಾರಿಗೆ? ಅರ್ಪಿಸುವುದು. ಹೂವನ್ನು ದ್ವೇಷಿಸುವಂತಹ ಪಾಷಾಣ ಹೃದಯದವನಲ್ಲ' ಎಂದ ಹೇಮಂತರು ಶೈಲನನ್ನು ಕೂಡಿಸಿಕೊಂಡು ಸಮಾಧಾನ ಹೇಳಿದರು.

ನನ್ನ ತಪ್ಪೇನೂ ಇಲ್ಲವೆನ್ನುತ್ತಾರೆ! ಅಪರಾಧ ಯಾವುದೂ ನಡೆಯಲಿಲ್ಲ ವೆಂದು ಹೇಳುತ್ತಾರೆ, ಹಾಗಾದರೆ ಪ್ರಭಾ ಇಲ್ಲಿದ್ದಿದ್ದರೆ! ...... ಎಂಬ ಮಾತಿನ ಉದ್ಗಾರವೇನು? ಎಂದು ಕಾರಣ ತಿಳಿಯದ ಶೈಲಾ ಖಿನ್ನನಾಗಿಯೇ ಕುಳಿತಿದ್ದ.

ಶೈಲ ಸಮಾಧಾನ ಹೊಂದಲಿಲ್ಲ. ವಿಷಯವನ್ನು ಮರೆಮಾಚುವುದರಿಂದ ಅಸಮಾಧಾನ ಕಡಿಮೆಯಾಗದು, ಎಂದು ಖಿನ್ನನಾದವನನ್ನು ಕಂಡು ಹೇಮಂತರು, ನನಗೆ 'ಪ್ರಭಾಯೆಂಬ ಮಗಳಿದ್ದಾಳೆ, ಕಟಕ್‌ನಗರದಲ್ಲಿ ಅಜ್ಜ ನೊಂದಿಗೆ ನಿಂತಿದ್ದಾಳೆ. ಒಮ್ಮೆ ನಮ್ಮ ಮಾವಂದಿರ ಕೋಪ ಮತ್ತು ಹಠಕ್ಕೆ ಎದುರಾಗಿ ಅವರ ಇಚ್ಛೆಯಂತೆಯೇ ಪ್ರಭೆಯನ್ನು ಅಲ್ಲಿ ಬಿಟ್ಟು ಬಂದೆ. 'ಜಲಜೆ'ಯಲ್ಲಿ ನೀನು ಕಲ್ಕತ್ತೆಯಿಂದ ಬರುತ್ತಿದ್ದೆಯಲ್ಲಾ, ಆಗನಾನು ಕಟಕ್ ನಗರದಿಂದ ಹಿಂದಿರುಗಿ ಬರುತ್ತಿದ್ದೆ.'

'ಹೂವಿನ ವಿಷಯಕ್ಕೆ ಪ್ರವೇಶಿಸೋಣ. ನೀನು ಈ ಉದ್ಯಮಕ್ಕೆ ಪ್ರವೇಶಿಸುವ ಮೊದಲು ಅಲ್ಲಲ್ಲಿ ಬಿದ್ದಿದ್ದ ಹೂಕುಂಡಗಳ ಚೂರನ್ನು ನೋಡಿ ದ್ದಿರಬಹುದು. ಹಿಂದೆ 'ಮೈಥಿಲಿ'ಯಲ್ಲಿ ನೀನು ಕೈಗೊಂಡಿರುವ ತೋಟದ ಕೆಲಸವನ್ನೇ ಪ್ರಭೆಯೂ ಕೈಗೊಂಡಿದ್ದಳು. ಹೂಗಳೆಂದರೆ ಅವಳಿಗೂ ಮಹದಾಶೆ! ಬೆಳೆದಹೂಗಳು ಅವಳ ಮುಡಿಯನ್ನು ಅಲಂಕರಿಸುತ್ತಿದ್ದವು. ನೀನು ಹೇಗೆ ಅಡ್ಡಿಯಿಲ್ಲದೆ ಕೆಲಸ ನಿರ್ವಹಿಸುತ್ತಿರುವೆಯೋ ಹಾಗೆಯೇ ಅವಳೂ ನಡೆಸು ತ್ತಿದ್ದಳು; ನಾನು ಅಡ್ಡಿಪಡಿಸುತ್ತಿರಲಿಲ್ಲ. 'ಮೈಥಿಲಿ' ಆನಂದವನವಾಗಿ ಹೂಗಳು ಸಮೃದ್ಧಿಯಾಗಿ ಬೆಳೆಯತೊಡಗಿತು. ಪ್ರಭಾ! ಕಟಕ್‌ನಗರದಲ್ಲಿ ನಿಂತಳು. 'ಮೈಥಿಲಿ'ಯಲ್ಲಿ ಹೂವು ಬೆಳೆಯುವ ನೆಲೆಯಲ್ಲಿ, ಮುಳ್ಳು ಬೆಳೆಯು ಲಾರಂಭವಾಯಿತು.'

‘ಬೆಳೆದ ಹೂಗಳನ್ನು ನಾನು ನೋಡುತ್ತಿಲ್ಲವೆಂದು ತಿಳಿಯಬೇಡ! ನಾನು ಎಲ್ಲವನ್ನೂ ನೋಡುತ್ತಿರುವೆ. ಪ್ರಾರ್ಥನಾಮಂದಿರದಲ್ಲಿ ನೀನು ಇಟ್ಟು ಹೋಗಿದ್ದ ಹೂವು ನನ್ನನ್ನು ಆಕರ್ಷಿಸಿತು, ಮತ್ತು ಪ್ರಭೆಯನ್ನು ನೆನಪಿಗೆ ತಂದಿತು. ಎಚ್ಚರಿಕೆಯಿಂದ ನೋವನ್ನು ತಡೆದುಕೊಳ್ಳದೆ ನಾನು ಪ್ರದರ್ಶನ ಮಾಡಿಬಿಟ್ಟೆ! ಈ ಕಾರಣದಿಂದ ಅನರ್ಥವಾಯಿತು’ ಎಂದರು.

ಹೇಮಂತರ ದೀರ್ಘ ಹೇಳಿಕೆಯಿಂದ ಶೈಲನ ಸಂಶಯ ಅಸಮಾಧಾನವು ಕಳೆದವು.

‘ಗುರು ಎಂತಹ ದಯಾಮಯ! ಸೌಜನ್ಯಮೂರ್ತಿಗಳು ಜಗದಲ್ಲಿ ಎಷ್ಟು ಕ್ರೌರ್ಯಕ್ಕೆ ತುತ್ತಾಗಬೇಕು? ಮಗಳನ್ನು ಕರೆದೊಯ್ಯಲು ಮಾವನ ಅಡ್ಡಿಯೇನು? ಹೇಮಂತರು, ಹಠ, ಕೋಪಕ್ಕೆ ಎದುರಾಗಿ ಪ್ರತಿಭಟಿಸದೆ ಬಂದಿದಾರೆ! ಪ್ರತಿಭಟನೆಯಿಲ್ಲದೆ ಯಾವುದೂ ಸಾಗುವುದಿಲ್ಲ! ಎಂಬ ವಿಚಾರ ಅವರು ಮಾಡಲಿಲ್ಲ. ಹೆಚ್ಚಿನ ಹೊಣೆ ತಂದೆಗಲ್ಲದೆ ತಾತನಗೆಲ್ಲಿಯದು?’ ಎಂದು ಮನದಲ್ಲಿಯೇ ವಿಚಾರ ಬೆಳೆಸಿದ ಶೈಲ.

‘ಕಾರಣವಿಲ್ಲದೆ ವಿಚಾರ ಬೆಳೆಯುತ್ತಿದೆ’ ಎಂದು ಹೇಮಂತರು ಅಂದಿನ ಭಾವನಾಪ್ರಪಂಚದಿಂದ ದೂರವಾಗಲು ಎದ್ದು ಹೋದರು.

೯

‘ಮೈಥಿಲಿ’ ಯಾತ್ರಿ – ಸುಂದರವಾದ ತೋಟವೊಂದು ಶೈಲನಿಂದ ನಿರ್ಮಾಣವಾಯಿತು. ತೋ[illegible] ಭವಿಷ್ಯ ಬಲ್ಲವರಾರು? ಸ್ವಾತಂತ್ರ್ಯಜೀವಿಯಾದ ಶೈಲನನ್ನು ಮೆಚ್ಚಿದ ಹೇಮಂತರು, ಪರಾಧೀನ ಭಾರತವನ್ನು ಉದ್ಧರಿಸಬೇಕೆಂಬ ಕಾಂಕ್ಷೆ, ತರುಣರ ಹೃದಯದಲ್ಲಿ ಹೇಗೆ ಹೇಗೆ ಬೇರು ಬಿಡುತ್ತ [illegible]ಯುತ್ತಿದೆಯೆಂದು ಆಲೋಚಿಸಿದರು. ಯೋಚನೆ ಮುಂದುವರಿಯಿತು.

ವ್ಯವಸಾಯಶಾಖೆಗೆ ಸಂಬಂಧಿಸಿದ ಉದ್ಯೋಗಿ ಹೂದೋಟದಲ್ಲಿಯೂ ಆಸಕ್ತಿ ಹೊಂದಿದಾನೆ, ಗ್ರಂಥ ಭಂಡಾರದಲ್ಲಿಯೂ ಅವನಿಗೆ ಪ್ರೀತಿಯಿದೆ, ಎಂದು ಶೈಲನ ವಿವಿಧವಾದ ವ್ಯವಹಾರವನ್ನು ನೋಡಿದ ಹೇಮಂತರು—‘ನಿನ್ನ ದೃಷ್ಟಿಯೆಲ್ಲಾ ಕೃಷಿ, ಬೇಸಾಯದ ಕಡೆಗೆ ಹರಿದಿದೆ. ಕಲಾದೃಷ್ಟಿ, ರಸದೃಷ್ಟಿಯ ಕಡೆಗೆ ಮನಸ್ಸುವಾಲಿಲ್ಲ; ಅವುಗಳ ಕಡೆಗೆ ಸಹಾನುಭೂತಿ ನಿನಗಿಲ್ಲವೇ ಶೈಲಾ!’ ಎಂದು ಪ್ರಶ್ನೆ ಮಾಡಿದರು. ಹೇಮಂತರು ಕೇಳಿದ ಪ್ರಶ್ನೆ, ಉರಿಯುವ ದೀಪಕ್ಕೆ

ತುಪ್ಪ ಸುರಿದು ಜ್ಯೋತಿ ತಿದ್ದಿದಂತಾಯಿತು. ಅವನು ದೀಪವನ್ನೇ ಉದಾಹರಣೆಗೆ ಆರಿಸಿಕೊಂಡು, 'ಉರಿಯುವ ದೀಪವೊಂದನ್ನು ನಾವು ನೋಡುತ್ತೇವೆ. ಆಗ ಬೆಳಕು ಇದೆ ಎನಿಸುತ್ತದೆ. ಅಂದರೆ ಬೆಳಕಿನ ಅನುಭವ ನಮಗೆ ಉಂಟಾಗುತ್ತದೆ. ನಿಮ್ಮ ಪ್ರಶ್ನೆಗೆ ಉತ್ತರ ಕೊಡುವುದೆಂದರೆ ಬೆಳಕಿನ, ಸ್ವರೂಪವನ್ನು ಕೊಂಚ ಮಟ್ಟಗೆ ತಿಳಿದಂತೆಯೇ ಅಲ್ಲವೆ? ಕೃಷಿಯೂ ಒಂದು ಕಲೆ, ನಾನು ಬೆಳೆಯುತ್ತಿರುವ ಹೂಗಳೂ ಕಲಾ ವಿಶೇಷಗಳೇ ಹೆಚ್ಚೇಕೆ? ಹೂಗಿಡಗಳು ನನಗೆ ಕಲಾರೂಪಗಳಾಗಿ ಕಾಣಬರುತ್ತಿವೆ! ಇದಕ್ಕೆ ಮಿಂಚಿದ್ದು ಯಾವುದಿದೆ?' ಎಂದ ಶೈಲ.

ಶೈಲನಿಗೆ ಬದಲಾಗಿ ಹೇಮಂತರು 'ನೀನೊಬ್ಬ "ಹಾರ್ಟಿಕಲ್ಚರಿಸ್ಟ್" ಇರಬಹುದು, ಹೊಂದಾಣಿಕೆಯ ಭೂಮಿಯಲ್ಲಿ ಉತ್ತಮವಾಗಿಯೇ ಫಲಗಳನ್ನು ಬೆಳೆಯಬಹುದು; ಅವಕ್ಕೂ ಕಲೆಗೂ ಎಲ್ಲಿಯ ಸಂಬಂಧ' ಎಂದರು.

'ಶಿಲ್ಪಿಗೆ ಕೊರೆಯಲು ಶಿಲೆಯಿದೆ, ಚಿತ್ರಗಾರನಿಗೆ ಕುಂಚವಿದೆ, ಬರಹಗಾರನಿಗೆ ಲೇಖಣಿಯನ್ನು ನಿಯಾಮಕನು ಪಾಲಿಸಿರುವಂತೆ, ಕೃಷಿಗಾರನಿಗೆ ಸಮೃದ್ಧಿ ಭೂಮಿಯನ್ನು ನಿರ್ಮಿಸಿದಾನೆ! ಈ ಕಲಾವಿದನಿಗೆ ಬೆಳೆಯುವುದು ಅಳೆಯುವುದು ಮಾತ್ರವೇ ಕೆಲಸ' ಎಂದ ಶೈಲ.

'ನಾಡಿನ ಮುಂದಿನ ಗತಿಯನ್ನೂ, ಸ್ವಾತಂತ್ರ್ಯವನ್ನೂ, ವೈಭವವನ್ನೂ, ಹದಗೊಳಿಸುವುದಕ್ಕೆ ರಾಷ್ಟ್ರಗೀತ ಅವಶ್ಯಕ; ಹಾಗೆಯೇ ಬೆಳೆಯುವ ಜನಾಂಗಕ್ಕೆ ಕೃಷಿಯೂ, ಕೈಗಾರಿಕೆಯೂ, ತಾರಕ ಮಂತ್ರವಾಗಬೇಕೆಂದು ನೀನು ಬಯಸುತ್ತಿದ್ದೀಯೆ ಅಲ್ಲವೆ?' ಎಂದರು ಹೇಮಂತರು.

'ರಾಷ್ಟ್ರಗೀತವೆಂದು ಹೇಳಿದಿರಿ! ಗುರುದೇವ ಠಾಕೂರರು ಕೃಷಿಯನ್ನು ಹದಗೊಳಿಸುವುದಕ್ಕೆ ಹೊಸತೊಂದು ಶಾಖೆಯನ್ನು ತೆರೆದರಲ್ಲವೆ! ಕೃಷಿ—ಉದ್ಯೋಗವನ್ನು ಪೋಷಣೆಮಾಡಿ, ತಮ್ಮ ಕೃತಿಯೊಂದರಲ್ಲಿ ಕತ್ತಿಗಿಂತಲೂ ಕೃಷಿಕನ ಕೈ ಆಯುಧ ಹೆಚ್ಚು ಮೌಲ್ಯವೆಂದು ಪ್ರತಿಪಾದಿಸಿದಾರೆ!—ಅವರ ಅಭಿಪ್ರಾಯನಾದರೂ ಹೀಗಿದೆ :—

"I will qive up my other work.
I throw my swords and lances
down in the dust. do not send me

to Distant Courts; do nct bid me undertake new Conquests. But make me the Gardener of your flower Garden"

ಎಂದು ಶೈಲ ಗೀತೆ ಹಾಡಿ ತೋರಿದ.

ಈ ಕೃಷಿಕ, ಏನಾದರೂ ಸರಿಯೆ, ತನ್ನ ಅಭಿಪ್ರಾಯ ಸೂಚಿಸಿ ಸಮರ್ಥಿಸುವನಲ್ಲದೆ; ಸೋಲನೊಪ್ಪುವುದಿಲ್ಲ! ಅಭಿಪ್ರಾಯದೊಂದಿಗೆ ವಿವರಣೆ, ಉದಾಹರಣೆಗಳನ್ನು ಬೇರೆ ಕೊಡುತ್ತಾನೆ. ಮಾತಿನ ಸತ್ಯವನ್ನು ಸನ್ನಿವೇಶದಲ್ಲಿಯೇ ಕಾಣುತ್ತಿದೇನೆ. ಕೃಷಿ, ಕಷ್ಟಕರವಾದ ಉದ್ಯಮ. ಶೈಲನಲ್ಲಿ ಪ್ರೇಮವಿದೆ, ಕೆಲಸ ಮಾಡಬೇಕೆಂಬ ಕೆಚ್ಚಿದೆ; ಮುಂದುವರಿಯಲೂ ಬಲ್ಲವನಾಗಿದ್ದಾನೆ ಎಂಬ ಸದಭಿಪ್ರಾಯಪಟ್ಟರು.

೧೦

ಶೈಲಾ, ಇಲಾಖೆಗೆ ಸಂಬಂಧಪಟ್ಟ ವ್ಯವಸ್ಥಾನುಸಾರವಾದ ವಸಾಹತ್ತು ನೋಡಲು ಹೊರಟ. ಅರೆಕಾನ್ ಪರ್ವತಮಯ ಕಡಿದು ಪ್ರದೇಶದ ಪ್ರಾಚೀರಕ್ಕೂ ಬಂಗಾಳ ಕೊಲ್ಲಿಗೂ ಮಧ್ಯಭಾಗದ ಇಕ್ಕಟ್ಟು ಪ್ರದೇಶದಲ್ಲಿ ಸುತ್ತಾಡುವುದು ಅಸಾಧ್ಯದಮಾತು. ಬಿದಿರು, ಬಂಜರು ಕಾಡುಗಳಿರುವ ಭಾಗದಲ್ಲಿ ಸಾಗುವಳಿಗೆ ತರುವಂತಹ ಪ್ರದೇಶವೂ ಇದೆ, ಈ ನೆಲೆಯಲ್ಲಿ ಸುತ್ತಾಡಿದ. ಪರ್ವತದಿಂದ ವೇಗವಾಗಿ ಹರಿದು ಬರುವ ನಿರ್ಝರಿಯಿಂದ ಸಾಗುವಳಿ ಇಲ್ಲಿ ನಡೆಯಬೇಕು. ಬರ್ಮಿ ಕೃಷಿಕಾರರ ಜೀವನ ಪರಿಚಯ ಮಾಡಿಕೊಳ್ಳಲು ಶೈಲನಿಗೆ ಅವಕಾಶ ದೊರೆಯಿತು. ಬೊಂಬು ಮತ್ತು ಬಲವಾದ ಮುಳ್ಳುಗಳಿಂದ ಕೋಟೆಯಂತೆ ಹಳ್ಳಿಯನ್ನು ಅವರು ರಕ್ಷಿಸಿಕೊಂಡಿರುವುದನ್ನು ಶೈಲ ನೋಡಿದ. ಸಾಮಾನ್ಯವಾದ ಒಕ್ ಮರದ ಹಸರುಕಾಡುಗಳಲ್ಲಿ ಪ್ರವೇಶಿಸಿ ಸುತ್ತಾಡಿದ. ಬರ್ಮಿಯರೂ ಬೌದ್ಧಮತಾನುಯಾಯಿಗಳೂ ಅವನ ಕಣ್ಣಿಗೆ ಬಿದ್ದರು. ಅರಿಕಾನೀ, ಟಲಯಿಂಗ್, ಟವಾಯಿನ್ ಜನರನ್ನು ಗುರುತಿಸಿ ವಿಶೇಷವನ್ನು ತಿಳಿದ.

ಶೈಲ ಹೊರಟುದುದು ಸಮಿತಿಯೊಂದಿಗೆ, ಹಂಗಾಮಿ ಕೆಲಸ ನೋಡುತ್ತಿದ್ದವನನ್ನು ಕಾರ್ಯಾಲಯದವರು ಪರ್ವತ ಮಾಲೆಯ ಗುಡ್ಡ ಪ್ರದೇಶದಲ್ಲಿ ಸುತ್ತಾಡಲು ಕಳುಹಿಸಿಕೊಟ್ಟರು. ಇರವಾಡಿ, ಚಿಂಡ್ವಿನ್, ಸಾಲ್ವೀನ್ ನದಿಮುಖ

ದಲ್ಲಿ ಸಂಚಾರ ಮಾಡಿದನು. ಹಸರುಕಾಡಿನಲ್ಲಿ ತೇಗ, ಪಯಿನ್ಕ್ಯಾಡೋ, ಇನ್, ಇಂಗಿನ್ ಮುಂತಾದ ಮರಶ್ರೇಣಿಯನ್ನು ಶೈಲ ಸಮಿತಿಯವರಿಗೆ ನಿರ್ದೇಶಿಸಿ ಕೊಟ್ಟ. ಸಮಿತಿಗೆ ಮುಂದಾಳಾಗಿರಲಿಲ್ಲ, ಆದರೂ ಇತರರು ಅವನನ್ನು ಅನುಸರಿಸಿ ಹೋಗುತ್ತಿದ್ದರು. ಶೈಲ ಆಗ ಅವರಿಗೆ ಹಿರಿಯನಾದ.

ಉದ್ಯೋಗದಲ್ಲಿ ಆಡುತ್ತಿದ್ದ ದ್ವೇಷಾಸೂಯೆ ಅಲ್ಪ ಮಟ್ಟಿಗೆ ಈ ನೆವದಿಂದ ಕಡಿಮೆಯಾಯಿತು.

ಜೀವಿ ಹೆದರಬಾರದು ! ಕರ್ತವ್ಯ ಮಾಡಿಯೇ ತೀರಬೇಕು ! ಪ್ರತಿಭಟನೆ ಮಾಡುವುದು, ಸತ್ಯಕ್ಕೆ ಹೊಡೆದಾಡುವುದು, ಜೀವಿಯ ಕರ್ತವ್ಯ ! ಎಂದು ಅರ್ಥ ಮಾಡಿಕೊಂಡ ಶೈಲಾ, 'ಮೈಥಿಲಿ' ಯಿಂದ ದೂರವಾಗಿ ಅನೇಕ ದಿನಗಳ ವರೆಗೆ ಸುತ್ತಾಡಿ, ಮಾಂಡಲೆಗೆ ಬಂದ. ಇರವಾಡೀ ನದಿಯ ಮೂಲಕವೇ ಪ್ರೋಂ, ಪೆಗನ್, ಅನುರಾಪುರ ಮೂಲಕ ಮಾಂಡಲೆ ಸೇರಿದ.

ಪರ್ವತಮಾಲೆಯಲ್ಲಿ ಸುತ್ತಾಡಿ ಬಂದ ಶೈಲನನ್ನು, ಅಬುಜದತ್ತರು ಬರಮಾಡಿಕೊಂಡರು. ಸಹಜವಾಗಿ, ನಳಿನೀದತ್ತರು ಮಕ್ಕಳ ಪುರೋಗತಿಯನ್ನು ನೆನೆದರು.

"ಶೈಲನಿಗಾಗಿ ಚಿಂತಿಸಬೇಕಾಗಿಲ್ಲ, ನೆಮ್ಮದಿಯಿಂದಿರುವ ಅವನು ರಂಗೂನಿನಲ್ಲಿಯೇ ಶಾಶ್ವತವಾಗಿರಲೆಂದು ನಿಮ್ಮ ಇಷ್ಟವೇ ?" ಎಂದು ನಳಿನೀದತ್ತರು, ಅಬುಜದತ್ತರನ್ನು ಪ್ರಶ್ನಿಸಿದರು.

'ಹಾಗೇನೂ ಇಲ್ಲ. ಮುಂದೆ ಮಲಯಾ, ಜಾವ, ಕಡೆಗೆ ಹೋಗಲಿ. ಡೆಹರಾಡೂನ್ ಅಲ್ಲಿಂದ ಬಂದವನು ಅನುಭವಪಡೆಯಲೆಂದು ಸುಮ್ಮನಿರುವೆ' ಎಂದರು.

'ಬರ್ಮದಲ್ಲಿ ಇರುವವರೆಗೆ ಶೈಲಾ ರಂಗೂನಿನಲ್ಲಿರಲಿ ಅಥವಾ ಮಾಂಡಲೆಗೆ ಬರಲಿ. ಮತ್ತೆಲ್ಲಿಗೂ ಹೋಗುವುದು ಬೇಡ'

'ನೀನು ದೂರ ಹೋಗುವನೆಂದು ಹೆದರುತ್ತಿದೀಯೆ, ಆದರೆ ಶೈಲ ಹೆದರುತ್ತಿಲ್ಲ. ಅವನನ್ನು ಕುರಿತು ಅಷ್ಟು ಚಿಂತಿಸಬೇಕಾಗಿಲ್ಲ. ನಿಲ್ಲಲು ಶಕ್ತಿ ಪಡೆದಿದಾನೆ. ಸ್ನೇಹಿತರನ್ನೂ ಸಂಪಾದಿಸಿಕೊಂಡಿದಾನೆ' ಎಂದು ಅಬುಜದತ್ತರು ಧೈರ್ಯ ಹೇಳಿದರು.

'ಹೇಗಾದರೂ ಆಗಲಿ, ಶೈಲನನ್ನು ಭಾರತಕ್ಕೆ ಕಳುಹಿಸಿ, ನಮ್ಮ ಹಾಗೆ ಅಲೆದಾಟದಗೊಡವೆ, ನಮ್ಮ ಹುಡುಗರಿಗೆ ಬೇಡ! ಅವರು ನಮ್ಮ ಹಾದಿ ಅನುಸರಿಸದಿರಲಿ' ಎಂದರು ನಳಿನೀದತ್ತರು.

ಕಲ್ಕತ್ತೆ ಸೇರಿದ ಮಹೇಶನಮನಸ್ಸು ಚಿಗರಿಯ ಓಟದಂತೆ ಎಲ್ಲಿಂದ ಎಲ್ಲಿಗೋ ಓಡಾಡುತ್ತಲೇ ಇತ್ತು. ಶಿಕ್ಷಣಶಾಲೆ ಸೇರಲು ಕೆಲವುದಿನಗಳ ಅವಕಾಶವೇವಿದ್ದವು. ಅನೇಕರು ಭಟ್ಟಂಗಿಗಳಿಂದ ಮತ್ತು ಸೇವಕರಿಂದ ಹೊಗಳಿಸಿಕೊಂಡು, ತೃಪ್ತಿಪಡೆಯುವುದರಲ್ಲಿಯೇ ಮುಗಿಸುತ್ತಾರೆ. ಅವರ ಕಾರ್ಯಕ್ಷೇತ್ರವು ಮುಂದೆ ಬೆಳೆಯುವುದಿಲ್ಲ. ಈ ಬಲೆಯಲ್ಲಿ ಮಹೇಶನೂ ಸಿಕ್ಕಿಬಿದ್ದ.

ಕಳೆದ ಮಹಾಯುದ್ಧದಲ್ಲಿ, ತಮ್ಮ ಕ್ಷಾತ್ರತೇಜಸ್ಸನ್ನು ವೈರಿಗೆ ತೋರಿದ ವೀರರಿಗೆ, ಸಿಕ್ಕಿದಂತಹ ಗೌರವಾದರಗಳೇನು? ಭರತಖಂಡದಲ್ಲಿ ಸಾವಿರಾರು ಸಣ್ಣ ದೊಡ್ಡ ರಾಜರಿದ್ದಾರೆ! ಅವರು ತಮ್ಮ ಅಂತಸ್ತು ಮತ್ತು ವಂಶವನ್ನು ಸೂರ್ಯ ಚಂದ್ರರಿಗೆ ಸರಿಹೋಲಿಸಿ, ಅವರ ವಂಶದವರೇ ಎಂದು ಶೌರ್ಯವನ್ನು ಆಳೆದುಕೊಳ್ಳುತ್ತಿದ್ದಾರೆ. ನಿಜವಾಗಿ ಅವರು ರಾಜ್ಯದಲ್ಲಿ ನಡಿಸುತ್ತಿರುವುದು ಹತ್ಯಾಕುಂಡವಾದರೂ, ಮಾತನಾಡುವುದು ಬೇರೆಯಾಗಿದೆ. ಕತ್ತಿ, ಕಠಾರಿ, ಬರ್ಜಿಯಿಂದ ಕ್ಷಾತ್ರವನ್ನು ಅಳೆಯಬೇಕಾಗಿಲ್ಲ. ಜಯದೃಷ್ಟಿಯನ್ನು ಕಾಣುವರೆಂದು ಮುಂದೊಡುತ್ತಿರುವ ಈ ಜನರು ತಮ್ಮ ನೆಲೆಯಲ್ಲಿಯೇ ಅಪಜಯವು ಆಕ್ರಮಿಸುತ್ತಿರುವುದನ್ನು ಕಾಣರು ಎಂಬೀ ಸೂಕ್ಷ್ಮ ಮಹೇಶನಿಗೆ ಗೊತ್ತಾಗಲಿಲ್ಲ.

ಮೇಲಾಗಿ ಪದವೀಧರ, ಯೋಧನಾಗಬೇಕೆಂಬ ಅವನ ನೆತ್ತರವು ಕಾದು ಸಳಮಳ ಕುದಿದಂತೆ, ಅವನ ಚಿತ್ತವೂ ಅದೇ ಧ್ಯಾನದ ವಿಚಾರಣೆ ನಡೆಸಿತು. ಸ್ವೇಚ್ಛಾ ಅರಸ ಕುಮಾರನೊಬ್ಬನು, ಕಲಾಶಾಲೆಯಲ್ಲಿ ಮಹೇಶನಿಗೆ ಸಂಗಾತಿಯಾಗಿದ್ದ. ಆ ಕೃತ್ರಿಮಜೀವಿಯನ್ನೇ ಮಹೇಶ ಅನುಸರಿಸುತ್ತಿದ್ದ. ಪರಾಕ್ರಮ ಮತ್ತು ಹೆಚ್ಚಿನ ವೈಭವಕ್ಕೆ ಮನಸ್ಸು ಮಾಡಿದವನು, ಪರರ ಅಭಿಮತ, ಮತ್ತು ಸಲಹೆಯನ್ನು ಕೇಳಲಿಲ್ಲ. ಅನುಕರಣೀಕರಿಗೆ ತಮ್ಮದೇಶದ ಹಾನಿಯಿರದು, ಮಹೇಶನಿದೂ ಹಾಗೆಯೇ. ವ್ಯವಧಾನ ದೃಷ್ಟಿಯಿಲ್ಲದವನು, ಮಿಕ್ಕವರನ್ನು ಅಂಜುಗುಳಿಗಳೆಂದೂ, ಅಸೂಯಪರರೆಂದೂ, ಜರಿದು ನಡೆದುಬಿಟ್ಟ.

ಜರ್ಮನಿ, ಪೋಲೆಂಡ್ ಆಕ್ರಮಣಕ್ಕೆ ನುಗ್ಗಿತ್ತು. ಎರಡು ಮೂರು ದಿನಗಳೊಳಗಾಗಿಯೇ ಬ್ರಿಟನ್ ಮತ್ತು ಫ್ರಾನ್ಸ್ ಯುದ್ಧಘೋಷಣೆ ಮಾಡಿತು.

ಭಾರತವಲ್ಲಿ ಯುದ್ಧದ ಹೊಸ ಚಟವಟಿಕೆ ಆರಂಭವಾಯಿತು. ನಮಗೂ ಯೂರೋಪಿಗೂ ಸಾವಿರಾರು ಮೈಲಿ ಅಂತರವಿದೆ. ಅಲ್ಲಿ ಯುದ್ಧ ನಡೆದರೇನು? ಎಂದು ಹೇಳಿಕೊಳ್ಳುತ್ತಿದ್ದವರು, ಕೆಲವು ತಿಂಗಳೊಳಗಾಗಿಯೇ ಅಭಿಪ್ರಾಯ ಬದಲಾಯಿಸಿದರು. ಆಡಳಿತಗಾರರು ಹೊಸ ಮೋಹವನ್ನು ಜನತೆಗೆ ಹಿಡಿಸಿದರು. ಭಾರತೀಯರಿಗೆ ಶಸ್ತ್ರಹಿಡಿಯಲೂ ಅಧಿಕಾರವಿಲ್ಲವೆಂದು ಒಮ್ಮೆ ಪರಿಗಣಿಸಿದವರು, ಸೈನ್ಯಶಿಕ್ಷಣ ಕೇಂದ್ರ ಸ್ಥಾಪಿಸಿದರು. ಶತ್ರುವಿನ ಪಾದಾಗತದಿಂದ ನಮ್ಮ ಭೂಮಿ ನಾಶವಾಗುತ್ತಿದೆ, ದೇಶಪ್ರೇಮಿಗಳು, ಸ್ವಾತಂತ್ರ್ಯವೀರರು ಮುಂದೆ ಬಂದು ಹೋರಾಟ ನಡೆಸಲೆಂದು ಪ್ರಚಾರ ಆರಂಭವಾಯಿತು.

ಪೋಲೆಂಡ್ ಆಕ್ರಮಣ ಮುಗಿದು, ಡೆನ್ಮಾರ್ಕ್, ನಾರ್ವೆ, ಹಾಲೆಂಡ್, ಬೆಲ್ಜಿಯಂ ತುತ್ತಾದಾಗ ಪ್ರಚಾರಕಾರ್ಯಕ್ಕೆ ಮರುಳಾದ ಅಸಂಖ್ಯಾತನಿರುದ್ಯೋಗಿ ತರುಣರು, ಹೊಸಶಿಕ್ಷಣಕ್ಕೆ ಬಲಿಯಾದರು. ನಿರುದ್ಯೋಗಿ ತರುಣರು, ಸೈನ್ಯಕ್ಕೆ ದುಂಬಾಲುಬಿದ್ದಂತೆ, ವೃತ್ತಿಗಾಗಿಯೂ, ವ್ಯಕ್ತಿತ್ವಕ್ಕಾಗಿಯೂ, ಹಲಬುತ್ತಿದ್ದ ಮಹೇಶ ಕೂಡಲೇ ಸೇರಿಹೋದ. ಸೈನ್ಯಶಾಖೆ, ರಾಷ್ಟ್ರವನ್ನು ಶತ್ರುಪೀಡೆಯಿಂದ ಬಿಡಿಸಲು, ಬೇರೆ ಬೇರೆ ಭಾಗಕ್ಕೆ ಹೊರಟಿತು. ಆಗ ಮಹೇಶನೂ ದೂರವಾದ.

## ೧೧

ಬರ್ಮಾ ವಸಾಹತ್ತು ಶೋಧನೆಯ ಕೆಲಸದಲ್ಲಿ ಶೈಲನಿದ್ದಾಗ, 'ಮೈಥಿಲಿ'ಯಲ್ಲಿ ಘಟನೆಯೊಂದು ನಡೆಯಿತು. ಬರ್ಮಾ ವ್ಯಾಪಾರಿಯೊಬ್ಬ 'ಮೈಥಿಲಿ' ಪ್ರವೇಶಿಸಿ, ಹೇಮಂತರನ್ನು ಕಾಣಬಯಸಿದ. ಹಿಂದೊಮ್ಮೆ ಕುಮಾರಿ ಪ್ರಭಾ, 'ಮೈಥಿಲಿ' ಯಲ್ಲಿ ನಿಂತಿದ್ದಾಗ, ಅವಳ ಕೋರಿಕೆಯಂತೆ ವಜ್ರಹಾರದ ತಯಾರಿಕೆ ಹೇಮಂತರು ಒಪ್ಪಿಗೆ ಕೊಟ್ಟಿದ್ದರು. ಪ್ರಭಾ ಕೋರಿದ ವಜ್ರದಕಲ್ಲುಗಳು ಸುಲಭವಾಗಿ ದೊರೆಯದು, ಹಾರದ ತಯಾರಿಕೆಗೆ ತಡವಾಗುವುದು ಎಂದು ಅವಧಿ ಪಡೆದಿದ್ದ. ಬಹಳ ದಿನಗಳ ಮೇಲೆ, ಹಾರವನ್ನು ಸಿದ್ಧಪಡಿಸಿ ಹೇಮಂತರಿಗೆ ಒಪ್ಪಿಸಲು 'ಮೈಥಿಲಿ'ಗೆ ಬಂದ. ಹಾರ ಸಿದ್ಧವಾಗಿ ಬರುವುದರೊಳಗೆ ಪ್ರಭೆಯೇ ಅಲ್ಲಿರಲಿಲ್ಲ. ಈ ವಿಚಾರ ಅವನಿಗೆ ತಿಳಿದಿರಲಿಲ್ಲ.

ವ್ಯಾಪಾರಿ ಪ್ರವೇಶಿಸಿದಾಗಲೇ, ಹೇಮಂತರಿಗೆ ಒಪ್ಪಿಗೆ ಕೊಟ್ಟ ವಜ್ರಹಾರದ ನೆನಪಾಯಿತು. 'ಪ್ರಭೆಯೇ ಇಲ್ಲದಿರುವಾಗ ಹಾರದಿಂದೇನು?' ಎಂದು

ಅವರು, ಬಂಗಲೆಯೊಳಗೆ ಕರದೊಯ್ದರು. ಮೊಕಮಲ್ಲಿನ ಪೆಟ್ಟಿಗೆಯಲ್ಲಿ, ಅಂದವಾಗಿಡಿಸಿದ ವಜ್ರಹಾರವನ್ನು ವ್ಯಾಪಾರಿ, ನಿಧಾನವಾಗಿ ತೆಗೆದು ಹೇಮಂತರ ಕೈಗಿತ್ತ.

'ಸುಶ್ರಾವ್ಯಧ್ವನಿಯಿಲ್ಲದಿರಲು, ಕಾವ್ಯಗಳೆಲ್ಲವೂ ಕಗ್ಗದಂತೆ ಬೇಸರ ಹುಟ್ಟಿಸುತ್ತದೆ. ಹೂವುಗಳು ಪ್ರಭೆಗೆ ಪ್ರಿಯವಾಗಿದ್ದವು. ನೀಳವಾದ ಕೇಶ ರಾಶಿಯನ್ನು ಅವುಗಳು ಅಲಂಕರಿಸಿದ್ದವು. ಪ್ರಭಾ! ಒಲವು ಚೆಲುವುಗಳಿಲ್ಲದೆ ಹೋಗುತ್ತಿರುವ ನನ್ನ ಬಾಳಿಗೆ ಬೆಲೆಏನು? ನೀನು ಪುಟ್ಟ ಹಕ್ಕಿಯಂತಿದ್ದೆ. ನನಗೆಷ್ಟೊ ಬೇಸರ ಮಾಯವಾಗಿ ಆನಂದವಾಗುತಿತ್ತು. ನೀನು 'ಮೈಥಿಲಿ' ಯಲ್ಲಿ ಅಂತಃವಾಣಿಯಂತಿದ್ದೆ, ನನಗೆ ಆಗ ಭಾವೋದಯವಾಗುತಿತ್ತು. ಕಾರ್ಮೋಡಗಳ ಆರ್ಭಟ, ಸಿಡಿಲು ಮಿಂಚುಗಳ ರೌದ್ರಾವೇಶದಲ್ಲಿ; ಕಾತನ ಕೈಗೆ ಸಿಕ್ಕಿದ ನಾನು, ನಿನ್ನನ್ನು ಬಿಟ್ಟುಬಂದೆ. ದೇವತೆಯಿಲ್ಲದ ದೇಗುಲ ಶೋಭಿಸುವುದಿಲ್ಲ. ಈಗ ತಂದಿರುವ ವಜ್ರಹಾರವನ್ನು ಯಾರಿಗೆ ಕೊಡಲಿ?' ಎಂದು ಮನದಲ್ಲಿಯೇ ನೊಂದ ಹೇಮಂತರು, ತಮ್ಮೆದುರಿಗೆ ಕುಳಿತ ವ್ಯಾಪಾರಿಯ ನೆನಪನ್ನು ತಂದುಕೊಂಡರು.

'ಈ ಹಾರವನ್ನು ಹಾಕಿಕೊಳ್ಳುವವರು ಯಾರೂ ಇಲ್ಲಿಲ್ಲವಲ್ಲಾ' ಎಂಬ ಅವರ ಹೃದ್ಭಾವನೆ, ಹೊರಬಿದ್ದಿತು.

ಬೆಲೆ ಬಾಳುವ ಈ ಹಾರಕ್ಕೆ ಪಟ್ಟ ಕಷ್ಟವೆಷ್ಟು? ವೆಚ್ಚವೆಷ್ಟು? ಏನಾದರೂ ಹಾರದಲ್ಲಿ ಕುಂದು ಕಾಣಿಸುತ್ತಿರುವುದೋ ಎಂದು ವ್ಯಾಪಾರಿ ಗಾಬರಿಯಾದ. ವ್ಯಾಪಾರದೃಷ್ಟಿಯ ಆಶಾ ಕಿರಣದ ಹೊಂಗನಸಿನಲ್ಲಿದ್ದವನು, ಹೇಮಂತರ ಹೃದ್ಭಾವನೆಯನ್ನು ಕೇಳಿ ನಿರಾಶನಾದ. ಆಗ ಹೇಮಂತರು 'ಈ ಹಾರದ ಬೆಲೆ ಏನು?' ಎಂದು ಕೇಳಿದರು. ವ್ಯಾಪಾರಿಯ ಜೀವಕ್ಕೆ ಮತ್ತೆ ಉಸಿರು ಬಂದಂತಾಯಿತು. ಅವನು ನಾಲ್ಕು ಅಂಕಿ ಗುರುತುಳ್ಳ ಪಟ್ಟಿಯೊಂದನ್ನು ಹೇಮಂತರಿಗೆ ಕೊಟ್ಟ.

ಅನಂತಸಾಗರದ ಎದುರಿನಲ್ಲಿದ್ದರೂ ಒಂದೆರಡು ಬೊಗಸೆ ನೀರಿನಿಂದ ಜನರು ತೃಪ್ತರಾಗುತ್ತಾರೆ, ನೀರಾಟವಾಡಿ, ಬಳಲಿದಾಗ, ಕ್ಷಣಕಾಲ ಸುಮ್ಮನಿದ್ದು, ನೂತನೋತ್ಸಾಹದಿಂದಿರುತ್ತಾರೆ. ವ್ಯಾಪಾರಿ, ಹಾರದ ವ್ಯವಹಾರ

ಮುಗಿದರೆ ಸಾಕೆಂದು ಕಾಯುತ್ತಿದ್ದ. ಹೇಮಂತರು ಹೆಚ್ಚುಬೆಲೆಗಾಗಿ ಯೋಚಿಸಲಿಲ್ಲ. ಕೊಂಡು ಮಾಡುವುದೇನು? ಎಂದು ಚಿಂತಿಸುತ್ತಿದ್ದರು. ತಯಾರಿಕೆಗೆ ಒಪ್ಪಿಗೆ ಕೊಟ್ಟಿದುದು ನಿಶ್ಚಯ. ಹಾರ ಸಿದ್ಧವಾಗಲು ತಡವಾಯಿತು. ಸಿದ್ಧವಾದ ಹಾರವನ್ನು ತಂದಿರುವಾಗ ನಿರಾಕರಿಸಿ ಕಳುಹಿಸುವುದರಲ್ಲಿ ಅರ್ಥವಿಲ್ಲ ಎಂದು ತಿಳಿದರು. ಪ್ರಭಾ, ಒಂದುವೇಳೆ ಇಲ್ಲಿದ್ದು, ಹಾರವನ್ನು ಕಂಡು ಸಂತೋಷ ಪಟ್ಟಿದಲ್ಲಿ ನನಗೂ ಆನಂದವಾಗುತಿತ್ತು. ಅವಳು ಇಲ್ಲದಿರುವುದೇ ಮುಖ್ಯ ಕಾರಣವನ್ನಾಗಿಟ್ಟುಕೊಂಡು ವ್ಯಾಪಾರಿಯನ್ನು ಕಳುಹಿಸಿಬಿಡುವುದು ಒಳ್ಳೆತಲ್ಲವೆಂದು ಹೇಮಂತರು, ವಜ್ರಹಾರವನ್ನು ಕೊಂಡರು. ಕ್ರಯಪಡೆದ ವ್ಯಾಪಾರಿ ಗೆಲುವಿನಿಂದಲೇ 'ಮೈಥಿಲಿ' ಯಿಂದ ಹೊರಬಿದ್ದ.

ವಜ್ರಹಾರ ಕಣ್ಣು ಕೋರೈಸುವ ಹಾಗೆ ಮಿರುಗುತ್ತಿದೆ. ವಜ್ರಗಳು ಚನ್ನಾಗಿಯೇ ಇರಬೇಕು. ಹಾರವನ್ನು ಕೊಂಡಾಯಿತು, ಬೆಲೆಬಾಳುವುದನ್ನು ಕಾಪಾಡಿಕೊಂಡು ಬರಬೇಕಾಗಿದೆ ಎಂಬ ಹೊಣೆಯನ್ನು ಹೇಮಂತರು ನೆನೆಸಿದರು. ಬಣ್ಣದ ಹೂಗಳನ್ನು ಒಮ್ಮೆ ಕಂಡು ಪ್ರಭೆಯನ್ನು ನೆನೆದ ಹೇಮಂತರು, ವಜ್ರಹಾರವನ್ನು ಹಿಡಿದು ಮರುಕಪಟ್ಟರು. ಅವಳಿಗೆ ಪ್ರಿಯವಾದ ಹಾರ ನನ್ನ ಹತ್ತಿರವಿದೆ, ಎಂದು ಸೇರುವುದೊ ಹೇಗೊ ಹೇಳಲಾಗದು ಎಂದು ಚಿಂತಿಸಿದರು.

೧೨

ಮೂಂಡಲೆಯಿಂದ ಶೈಲ ರಂಗೂನಿಗೆ ಬಂದ. ಹೇಮಂತರು ಇನ್ನೂ ದುಃಖದಲ್ಲಿಯೇ ಇದುದರಿಂದ ಅವರ ಗಮನ ಶೈಲನ ಕಡೆಗೆ ಹರಿಯಲಿಲ್ಲ. ಅರಣ್ಯ ಸಂಪತ್ತು, ಪ್ರವಾಸದ ಸವಿನೆನಪು ತಿಳಿಸಲು ಆತುರನಾಗಿದ್ದ ಶೈಲ, ನಿರುತ್ಸಾಹನಾದ. ಮಗಳನ್ನು ನೆನೆದು ಅವರು ದುಃಖಿಸುತ್ತಾರೆ. ಅದೊಂದರ ವಿನಹ ಅವರಿಗೆ ಕೊರತೆಯೇನೂ ಇಲ್ಲ. ಹೇಮಂತರು ದುಃಖಿಸುವುದು ಸಹಜ. ನನಗೆ ಯಾರೂ ಇಲ್ಲ. ಎಲ್ಲರೂ ದೂರವಾಗಿದಾರೆ ಎಂದು ಶೈಲ ಸಮಾಧಾನ ಹೊಂದಿದ. ಚಿತ್ತ ಹದಕ್ಕೆ ಬಂದಾಗ, ಹೇಮಂತರು ಶೈಲನನ್ನು ನೋಡಿದರು.

'ಬಹಳ ದಿನಗಳವರೆಗೆ ನೀನು, ನಿಂತುಬಿಟ್ಟೆ, ನನಗೆಷ್ಟೊ ಬೇಸರವಾಯಿತು. ಎಂದು' ಮಾತನಾಡಿಸಿದರು.

'ನನಗೂ ಮನಶ್ಶಾಂತಿಯಿರಲಿಲ್ಲ, ನೌಕರಿಗೆ ಸೇರಿದನಂತರ ಒಂದುಎಡೆಯಲ್ಲಿಯೇ ನಿಂತು ಕೆಲಸಮಾಡುವುದು ಹೇಗೆ ಸಾಧ್ಯ?' ಎಂದು ಶೈಲ ಉತ್ತರವಿತ್ತು, ಸಂಚಾರದ ವಿವರಣೆಯನ್ನು ತಿಳಿಸಿದ.

'ನಿನ್ನ ಹೂದೋಟದ ಕೆಲಸವನ್ನು ಯಾರೂ ತೆಗೆದುಕೊಳ್ಳಲಿಲ್ಲವಲ್ಲಾ!' ಎಂದರು.

'ಅದರ ಕೆಲಸ ನನಗೆ ವಿರಾಮವಲ್ಲ' ಎಂದ ಶೈಲ ಹೊರಟು ನಡೆದ.

ವ್ಯಾಪಾರಿ 'ವೈಥಿಲಿ' ಪ್ರವೇಶಿಸಿದುದು, ವಜ್ರಹಾರವನ್ನು ಹೇಮಂತರು ಕೊಂಡುದು, ಯಾವುದೂ ಶೈಲನಿಗೆ ತಿಳಿಯಲಿಲ್ಲ. ಪ್ರವಾಸ ಮುಗಿದನಂತರ ಅವನು 'ವೈಥಿಲಿ' ಪ್ರವೇಶಿಸಿ ಬಂದ. ಆಗ ಹೇಮಂತರು ದುಃಖದಲ್ಲಿದ್ದರು. ಅವರು ಮಗಳಿಗಾಗಿ ಪರಿತಪಿಸುತ್ತಿದ್ದಾರೆಂದು ಅವನಿಗೆ ತಿಳಿದುಬಂತು.

ಇಲಾಖೆಯ ಹಂಗಾಮಿ ಕೆಲಸ ಶೈಲನಿಗೆ ತೀರಿತು. ಮುಖ್ಯಾಧಿಕಾರಿ, ಅಬುಜದತ್ತರಿಗೆ ಬರೆದು ತಿಳಿಸಿದ. ಪ್ರಶಸ್ತಪತ್ರಿಕೆಯೂ, ಅಲ್ಪವೇತನವೂ ಶೈಲನಿಗೆ ಸಿಕ್ಕಿತು. ಅವನು ಹಂಗಾಮಿ ವೃತ್ತಿಯಿಂದ ನಿವೃತನಾದ. ಅವನಿಗೆ ಭಾರತಕ್ಕೆ ಹಿಂತಿರುಗುವ ಮನಸ್ಸಾಯಿತು. ಅವನು 'ವೈಥಿಲಿ'ಯ ಕೃಪಾಕ್ಷೇತ್ರ ನನಗೆ ಮುಗಿಯಿತು. ನಾನು ಹೊರಡುವನೆಂದು ತಿಳಿದರೆ ಹೇಮಂತರು ಎಷ್ಟು ನೊಂದುಕೊಳ್ಳುವರೋ ಎಂದು ಆಲೋಚಿಸಿದ.

'ನನ್ನ ಹಂಗಾಮಿ ವೃತ್ತಿ ಮುಗಿಯಿತು, ನಾನಿನ್ನು 'ವೈಥಿಲಿ'ಯಿಂದ ದೂರವಾಗುವೆ' ಎಂದ ಶೈಲಾ.

'ಏನು ಶೈಲಾ! ಏನು ಹೇಳುತ್ತಿದಿಯೋ?' ಎಂದು ಆಶ್ಚರ್ಯದಿಂದ ಹೇಮಂತರು ಕೇಳಿದರು.

'ರಂಗೂನಿನಿಂದ ಹೊರಡಲು ಅನುಮತಿ ಸಿಕ್ಕಿದೆ' ಎಂದವನು ಮುಖ್ಯಾಧಿಕಾರಿಯಿಂದ ದೊರೆತ ಪ್ರಶಸ್ತಪತ್ರಿಕೆಯನ್ನು ಹೇಮಂತರ ಕೈಗಿತ್ತ.

'ನೀನೂ ಹೊರಟುಹೋಗುವೆಯಾ!' ಎಂಬ ನುಡಿಯು ಹೇಮಂತರಿಂದ ಹೊರಬಿತ್ತು.

'ನಾನು ರಂಗೂನ್ ಬಿಡುವನೆಂದು ಕೇಳಿ ನಿಮಗೆ ದುಃಖವಾಗುವುದು. ದೊರೆಕಿದ ಜ್ಞಾನ, ನೀರೆಳಿಸಿ ಬೆಳೆಸಿದ ಹೂಗಳು, ಹೂದೋಟವನ್ನು ಬಿಟ್ಟು ಹೊರಡಲು ನನಗೂ ವ್ಯಸನವಾಗುವುದು. ಮುಂದಿನ ಉದ್ಯೋಗಮಾರ್ಗ ಎಲ್ಲಿದೆಯೋ ಯಾರು ಬಲ್ಲರು? ಅದನ್ನು ನಾನು ಹುಡುಕಿ ಹೋಗಬೇಕಾಗಿದೆ' ಎಂದ ಶೈಲ.

ಅಬುಜದತ್ತರನ್ನು ಕಂಡು ಯೋಚಿಸಿ, ಮುಂದುವರಿಯುವುದೆಂದು ಮಾಂಡಲೆಗೆ ಹೊರಟ.

ನಾನು ರಂಗೂನ್ ಬಿಟ್ಟು ಹೊರಡಬೇಕು! ಹೇಮಂತರ ಋಣವನ್ನು ಹೇಗೆ ತೀರಿಸಬಲ್ಲೆ? ನನ್ನಿಂದ ಅವರು ಏನೂ ಬಯಸುತ್ತಿಲ್ಲ ಎಂದು ನೆನೆಯುತ್ತಾ ಶೈಲ ರಂಗೂನಿನಿಂದ ಮಾಂಡಲೆ ಹಾದಿ ತುಳಿದ. 'ಜಲಜಾ' ನೌಕೆಯಿಂದ ಆರಂಭಿಸಿ ಇಡೀ ಒಂದು ವರ್ಷದಲ್ಲಿ ಕಳೆದುಹೋದುದನ್ನೆಲ್ಲಾ ಸ್ಮೃತಿಗೆ ತಂದುಕೊಂಡ. ನಮ್ಮೊಳಗೆ ಬೆಳೆದು ನಿಂತ ಬಾಂಧವ್ಯ ಕಡಿದುಹೋಗುವುದಲ್ಲಾ! ಎಂಬ ನೋವಾಯಿತು, ಹಾಗೆಯೇ ಅವನು ಅಬುಜದತ್ತರನ್ನು ಕಂಡ.

ವೃತ್ತಿ ಮುಗಿದ ಸಂಗತಿ ದತ್ತರಿಗೆ ಮೊದಲೇ ತಿಳಿದಿತ್ತು. ಭಾರತಕ್ಕೆ ಹಿಂದಿರುಗಿ ಹೋಗಲೆಂದು ಅವರೂ ಇಚ್ಛಿಸಿದರು.

'ನಿನಗೆ ಮುಖ್ಯಾಧಿಕಾರಿಯಿಂದ ದೊರೆತ ಪತ್ರಿಕೆಯಿಂದಲೇ ಅನುಕೂಲವಾಗುವುದು. ಉದ್ಯೋಗವನ್ನು ಸಂಪಾದಿಸಿಕೊಳ್ಳುವೆ. ಅಧಿಕಾರದಲ್ಲಿ ಅಥವಾ ಖಾಸಗೀವೃತ್ತಿಯಲ್ಲಿ ನಿಲ್ಲು. ರಾಜಕೀಯ ಆಂದೋಲನವೆದ್ದಿದೆ. ಮಿಕ್ಕ ವಿಷಯಗಳಕಡೆ ಗಮನಬೇಡ. ನಮಗೂ, ಮನೆತನಕ್ಕೂ, ಅಗೌರವ ತರುವ ಕಾರ್ಯಬೇಡ!' ಎಂದು ಕೊನೆಯದಾಗಿ ಬುದ್ಧಿ ಹೇಳಿ ಕಳುಹಿಸಿದರು.

'ನೀನು ಪದೇ ಪದೇ ದೂರವಾಗಿ ಹೋಗುತ್ತಿರುವೆ! ಕಲ್ಕತ್ತೆಯಿಂದ ಡೆಹರಾಡೂನ್, ಡೆಹರಾಡೂನಿನಿಂದ ರಂಗೂನ್, ಪುನಃ ರಂಗೂನಿನಿಂದ ಭಾರತಕ್ಕೆ ಎಲ್ಲಿಗೋ ಹೋಗುತ್ತಿರುವೆ. ನೀನು ಭಾರತಕ್ಕೆ ಹೊರಟಿರುವುದು ಸಂತೋಷದ ಸಂಗತಿ. ನೇರವಾಗಿ ಕಲ್ಕತ್ತೆಗೆ ಹೊರಡು, ಮಹೇಶ ಅಲ್ಲಿರಬಹುದು; ಅವನಿಂದ ಪತ್ರಗಳೇ ಬರುತ್ತಿಲ್ಲ, ಎಲ್ಲವನ್ನು ವಿಚಾರಿಸು' ಎಂದು ನಳಿನೀದತ್ತರು ಮಮತೆಯ ಮಾತನ್ನು ಶೈಲನಿಗೆ ಹೇಳಿ ಕಳುಹಿಸಿದರು.

ಜಪಾನ್ ಆಗಾಗಲೇ ಮನಿಲಾ, ಷಾಂಗೈ, ಮಲಯಾ, ಥೈಲಾಂಡ್, ಹಾಂಕಾಂಗ್ ಮೊದಲಾದ ಕಡೆಗಳಲ್ಲಿ ಧಾಳಿ ಎಬ್ಬಿಸಿತು. ನಮಗೂ ಈ ಭಾರ ತಪ್ಪಿದ್ದಲ್ಲವೆಂದು ಬರ್ಮಿಯರು ಭೀತರಾದರು. ರಾಜಕೀಯದಲ್ಲಿ ಮತ್ತು ಸಾಮಾನ್ಯ ಜೀವನದಲ್ಲಿ ಆಗ ಗಲಭೆಯೆದ್ದಿತು. ಬರ್ಮದಲ್ಲಿ ಶತ್ರುಭಯಕ್ಕಿಂತಲೂ ಬರ್ಮಿಯರ ಭಯವೇ ಹೆಚ್ಚಾಗಿ ಭಯಂಕರ ರೂಪತಾಳಿತು.

ಈ ಸಂದಿಗ್ಧ ಸಮಯದಲ್ಲಿ ಪಾರಾಗಲು ಅಧಿಕಾರಿ ಅವಕಾಶ ಕೊಟ್ಟ ಎಂದ ಒಂದು ತಡವೆ, ಶೈಲಾ ಸಂತೋಷಿಸಿದ. ಹೇಮಂತರನ್ನು, ಅಬುಜದತ್ತ ನಳಿನೀದತ್ತರನ್ನು ನೆನೆದಾಗ, ಅವರನ್ನು ಬಿಟ್ಟುಬರುವುದು ಕೇಡೆನಿಸಿತು. ಅವನು ರಂಗೂನಿಗೆ ಪುನಃ ಬಂದ.

'ನಿನ್ನನ್ನು ಅಗಲುವ ಪ್ರಸಂಗ ಬಂದಿದೆ ನಾನು ಮತ್ತೆ ನೋಡುವೆನೋ ಇಲ್ಲವೋ ಹೇಳಲಾರೆ! ನಾನು ನಿನ್ನ ಹಿತಾಕಾಂಕ್ಷಿಯೆಂದು ತಿಳಿ! ಮರೆಯ ಬೇಡ! ಅಭಿವೃದ್ಧಿಹೊಂದಿ ಬಾಳು, ಇದೇ ನನ್ನ ಹಾರೈಕೆ!' ಎಂದು ಹೇಮಂತರು ಶೈಲನನ್ನು ಬಲವಾಗಿ ಅಪ್ಪಿಕೊಂಡು ಕಣ್ಣೀರು ಸುರಿಸಿದರು.

ತುಂಬಾ ಮರುಗಿದ ಶೈಲ 'ನಿಮ್ಮನ್ನು ಬಿಟ್ಟು ಹೊರಡುವುದು ನನಗೂ ಕಷ್ಟವಾಗಿ ಮನಸ್ಸಿಗೆ ದುಃಖವಾಗುತ್ತಿದೆ' ಎಂದು ಸಿದ್ಧಮಾಡಿಕೊಳ್ಳುತ್ತಿದ್ದ. ಮುಂಜಾನೆ ಅವನು ಹಡಗೇರಲು ಏರ್ಪಾಡಾಗಿಹೋಗಿತ್ತು.

ಆ ರಾತ್ರಿ, ಹೇಮಂತರಿಗೆ ನಿದ್ರೆಬರಲಿಲ್ಲ. ದೂರವಾಗಿ ಹೊರಟುಹೋಗುವ ಶೈಲನಿಗಾಗಿ ಅವರು ಚಿಂತಿಸುತ್ತಿದ್ದರು—ಶೈಲ ಭಾರತಕ್ಕೆ ಹೊರಟಿದಾನೆ! ಹೇಗೂ ಕಲ್ಕತ್ತೆಗೆ ಹೋಗುವ, ಅವನೊಡನೆ ಪ್ರಭಾವಿಗೆ ಸಿದ್ಧವಾಗಿರುವ ಹಾರ ವನ್ನು ಏಕೆ ಕಳುಹಿಸಬಾರದು. ಕಟಕ್ ನಗರಕ್ಕೆ ಹೋಗಿ, ಚೌಧುರಿಯವರಿಗೆ ತಲುಪಿಸು ಎಂದು ಹೇಳಿದರೆ ಸಾಕು! ಸಂತೋಷದಿಂದ ಮಾಡುತ್ತಾನೆ ಎಂದು ಹೇಮಂತರು ಆಲೋಚಿಸಿದರು. ನಂಬಿಕೆಗೆ ಅರ್ಹರಾದವರು ಸಿಕ್ಕಿರುವಾಗ ವಜ್ರಹಾರವನ್ನು ಕಳುಹಿಸುವುದು ಉತ್ತಮವೆಂದು ಅವರ ಒಳಮನಸ್ಸು ಸೂಚಿಸಿತು.

ರಂಗೂನ್ ರೇವು ಸೇರಲು ಶೈಲ, ಮುಂಜಾನೆಯೇ ಸಿದ್ಧನಾದ. ಅವನೊ ಡನೆ ಹೇಮಂತರೂ ಹೊರಟರು. ಮುಂಚೆಯೇ 'ನೀನು ನನಗೊಂದು ಉಪಕಾರ ಮಾಡಿಕೊಡಬೇಕು!' ಎಂದರು. ಅವರು ಕೇಳುವುದೇ ಅಪರೂಪ, ಕೊನೆಗೆ ಏನಾದರೂ ನನ್ನಿಂದ ಬಯಸಿದರಲ್ಲಾ, ಎಂದ ಶೈಲಾ ಉತ್ಸಾಹದಿಂದ ತಲೆದೂಗಿದ.

'ಇಗೋ ನನ್ನ ಕೈಯಲ್ಲಿರುವ ಈ ಸಣ್ಣ ಪೆಟ್ಟಿಗೆಯಲ್ಲಿ, ಕುಮಾರಿ ಪ್ರಭಾ ವಿಗೆ ಸೇರಿದ ಒಡವೆಗಳಿವೆ. ನೀನು ಕಟಕ್ ನಗರಕ್ಕೆ ಒಯ್ದು ತಲುಪಿಸಬೇಕು! ಸಾಧ್ಯವೇ?' ಎಂದು ಹೇಮಂತರು ಕೇಳಿದರು.

'ನೀವು ಚಿಂತಿಸಬೇಕಾಗಿಲ್ಲ, ನಿಮ್ಮ ಅಪೇಕ್ಷೆ ನಡಿಸಿಕೊಡುವೆ' ಎಂದು ಶೈಲಾ ಹೇಮಂತರ ಸಂದೇಹ ನಿವಾರಿಸಿದ.

'ಮಾಂಫೀರ್ ನಿನಗೆ ಸ್ವಲ್ಪ ಮಟ್ಟಿಗೆ ನೆನಪಿದೆ, ಕಟಕ್ ನಗರಕ್ಕೆ ಹೊರಟು ; ಶ್ರೀಮಂತರ ಶ್ರೇಣಿಯಲ್ಲಿ ಹುಡುಕಾಡಬೇಕು, ಅಲ್ಲಿ ವಿಜಯ ಭೂಷಣ ಚೌಧುರಿಯವರಿರುವರು. ನೀನು ರಂಗೂನಿನಿಂದ ಬಂದಿರುವನೆಂದು ಈ ಪೆಟ್ಟಿಗೆಯನ್ನು ಕೊಟ್ಟು ತಿಳಿಸಿದರಾಯಿತು! ಪ್ರಭೆಗೆ ತಲುಪುವುದು' ಎಂದು ಹೇಮಂತರು ಶೈಲನಿಗೆ ಸೂಚನೆ ಕೊಟ್ಟು, ಪೆಟ್ಟಿಗೆಯನ್ನು ಅವನ ಕೈಕ್ಕೆ ಕೊಟ್ಟರು.

'ನಿನಗಾಗಿ ನಾನು ಕೊಡುವ ಈ ಪುಸ್ತಕವು ನಿನ್ನ ಹತ್ತಿರವಿರಲಿ, ನೆನಪು ತರುತ್ತದೆ' ಎಂದು ದೇವೇಂದ್ರಸತ್ಯಾರ್ಥಿಯವರ ಲೋಕಗೀತೆಗಳ ಸಂಗ್ರಹಕೆ ತಮ್ಮ ಹಸ್ತಾಕ್ಷರ ಸೇರಿಸಿ ಶೈಲನಿಗೆ ಒಪ್ಪಿಸಿದರು.

ರೇವು ಮುಟ್ಟಲು ಅವಕಾಶ ಸ್ವಲ್ಪವೇ ಉಳಿದಿತ್ತು. ಹೊತ್ತಿಗೆ ಸರಿಯಾಗಿ ಅಬಜದತ್ತರು ಮಾಂಡಲೆಯಿಂದ 'ಮೈಥಿಲಿ'ಗೆ ಬಂದರು. ಹೇಮಂತರೂ ದತ್ತರೂ ಶೈಲನೊಂದಿಗೆ ಮೋಟಾರುಹತ್ತಿ ರೇವಿಗೆ ಹೊರಟರು. ಸಾಧಾರಣ ವಾಗಿ ನೆಮ್ಮದಿಯ ಕಾಲದಲ್ಲಿ ರೇವು ನಿಲ್ದಾಣಗಳಲ್ಲಿ ಅಷ್ಟು ಗಲಭೆಯಿರದು. ಶೈಲ ರಂಗೂನ್ ರೇವಿಗೆ ಬಂದಾಗ ಇಡೀ ನಗರವೇ ಪ್ರಯಾಣ ಕೈಗೊಂಡ ಹಾಗೆ ಭಾಸವಾಯಿತು. ಸಾವಿರಾರು ಜನರು ಪ್ರಯಾಣ ಬೆಳೆಸಲು ಆತುರ ರಾಗಿದ್ದಾಗ ಸೌಲಭ್ಯಗಳು ದೊರಕುವುದೆಲ್ಲಿ? 'ಈ ಪ್ರಯಾಣಗಳ ಅನುಭವ ನನಗೆ ಬಹಳವಾಗಿ ಹೋಗಿದೆ, ಮಲಯಾ ಪ್ರಾಂತ್ಯದಿಂದಲೇ ಲೆಕ್ಕವಿಲ್ಲದಷ್ಟು ಜನರು ಓಡಿಬಂದಿದ್ದಾರೆ! ಶೈಲನಿಗೆ ಹಡಗಿನಲ್ಲಿ ಸ್ಥಳ ದೊರೆಯಲು ಕಷ್ಟವಾದೀ ತೆಂದು ನಾನು ಬಂದೆ' ಎಂದು ದತ್ತರು ಹೇಮಂತರಿಗೆ ತಿಳಿಸಿದರು.

ಶೈಲ ಹಡಗು ಹತ್ತಿದ. ದತ್ತರು, ಹಿಂದಿರುಗಲಾರದ ಹೇಮಂತರೊಂದಿಗೆ 'ಮೈಥಿಲಿ'ಗೆ ಬಂದರು.

ಬರುತ್ತಿದ್ದಾಗ ಹಾದಿಯಲ್ಲಿ ದತ್ತರು, 'ನಿಮ್ಮನ್ನು 'ಮೈಥಿಲಿ'ಯಲ್ಲಿ ಬಿಟ್ಟು ಮಾಂಡಲೆಗೆ ಹೊರಡುವೆ' ಎಂದರು.

'ಎಲ್ಲರೂ ನನ್ನನ್ನು 'ಮೈಥಿಲಿ'ಯಲ್ಲಿ ಸುರಕ್ಷಿತವಾಗಿಬಿಟ್ಟುಹೋಗುತ್ತಲಿ ದ್ದಾರೆ' ಎಂದು ವ್ಯಸನದಿಂದ ಹೇಮಂತರು ನುಡಿದರು.

'ನಾವು ಬೆಳೆದ ಹುಡುಗರ ವಿಷಯವಾಗಿ ಅಷ್ಟು ಮೋಹ ಬೆಳೆಸಲಾಗದು, ಉದ್ಯೋಗ-ವೃತ್ತಿಯನ್ನವಲಂಬಿಸಿ ಅವರು ಎಲ್ಲೆಲ್ಲಿಗೋ ಹೊರಡಬೇಕಾಗುತ್ತದೆ' ಎಂದು ಅಬುಜದತ್ತರು ಸಮಾಧಾನಹೇಳುತ್ತಾ 'ನೀವು ಶೈಲನನ್ನು ಒಂದು ವರ್ಷ ಕಾಲ ಬೆಳೆಸಿ ಕಳುಹಿಸಿಕೊಟ್ಟಿರಿ, ಅಗಲಿಕೆಯಿಂದ ಬೇಸರಪಡುತ್ತಿದೀರಿ; ಮಾಂಡಲೆಗೆ ಬನ್ನಿ, ನಿಮ್ಮ ಬೇಸರ ಹರಿಯುವುದು' ಎಂದು ಹೇಳಿ 'ಮೈಥಿಲಿ' ಯಿಂದ ಹೊರಟರು.

## ೧೩

ರೆಂಗೂನಿನಿಂದ ಹಡಗು ಹೊರಟಿತು. ತುಂಬಿದ ಹಡಗು ಕಲ್ಕತ್ತೆ ಮುಟ್ಟುವುದೇ ಅಸಂಭವವಾಗಿತ್ತು. ಬರ್ಮಿಯರು ತಮ್ಮ ಚರ್ಯೆಯನ್ನು ಬದಲಾಯಿಸಲಿಲ್ಲ. ಮರ್ದನಕಾರ್ಯಕ್ಕೆ ಶತ್ರು ಮಗ್ನನಾಗಿದ್ದರೂ, ಇವರ ಭಿನ್ನಾಭಿಪ್ರಾಯಗಳು ಸಡಿಲವಾಗಲಿಲ್ಲ 'ತತ್ವದ ಧೋರಣೆ ಇವರು ಎಲ್ಲಿ ಬಿಡುತ್ತಾರೆ!' ಎಂದು ಶೈಲ ಅಂದುಕೊಂಡ.

ಬ್ರಹ್ಮದಲ್ಲಿ ಗಳಿಸಿ, ಗಂಟುಕಟ್ಟಿದ ಬಂಡವಾಳಗಾರರ ಗುಂಪೇ ಹಡಗಿನಲ್ಲಿ ಬಹಳವಾಗಿತ್ತು. ಶಾಂತಿ, ಸಮಾಧಾನವಿದ್ದಾಗ ಬರ್ಮಿಯರನ್ನು ಸುಲಿದು ಕೂಡಿಟ್ಟುದನ್ನು ಭದ್ರಪಡಿಸಲು, ಅವರು ಭಾರತಕ್ಕೆ ಹಿಂದಿರುಗುತ್ತಿದ್ದರು. ಕಲ್ಕತ್ತೆ ಮುಟ್ಟಿದರೆ ಸಾಕೆಂದು ಅವರ ಜೀವ ಹಾತೊರೆಯುತಿತ್ತು.

ಕಲ್ಕತ್ತೆ ಸೇರಿದಮೇಲೆ ಮಹೇಶನ ಪತ್ತೆಹಚ್ಚಬೇಕು, ದತ್ತರಿಗೆ ವಿಚಾರ ತಿಳಿಸಬೇಕು, ಮುಂದೆ ಕಟಕ್ ನಗರಕ್ಕೆ ಹೊರಡಬೇಕು ಎಂದು ಶೈಲ ತನ್ನಲ್ಲಿಯೇ ಲೆಕ್ಕ ಹಾಕಿಕೊಂಡ. ನಾನು ಕಲ್ಕತ್ತೆ ಬಿಟ್ಟು ಬಹಳ ದಿನವಾಗಿದೆ, ದಿನದಿನವೂ ಬದಲಾವಣೆ ಹೊಂದಿಹೋಗುತ್ತಿರುವ ನಗರದಲ್ಲಿ, ಮಹೇಶನನ್ನು ಎಲ್ಲಿ ಕಾಣುವುದೋ ಏನೋ ಎಂದು ಶೈಲನಿಗೆನಿಸಿತು.

ಹೇಮಂತರು ವಹಿಸಿಕೊಟ್ಟ ಆಭರಣದ ಪೆಟ್ಟಿಗೆಯ ನೆನಪಾಯಿತು ಶೈಲ ಭದ್ರವಾಗಿದೆಯೆಂದು ನೋಡಿಕೊಂಡು ತೃಪ್ತನಾದ. ಈ ಪೆಟ್ಟಿಗೆಯನ್ನು ಚೌಧುರಿಯವರಿಗೆ ತಲುಪಿಸುವವರೆವಿಗೂ ನನಗೆ ಶಾಂತಿ ದೊರೆಯದು, ಇದು ಖಚಿತವಾದ ವಿಷಯ, ಈ ಕೆಲಸವನ್ನು ತೀರಿಸಿಕೊಂಡು ಉದ್ಯೋಗದ ಬೇಟೆಯನ್ನು ಅನುಸರಿಸಿಹೋಗುವೆ ಎಂದು ತೀರ್ಮಾನಕ್ಕೆ ಬಂದ.

ದುಷ್ಟರ ದೌರ್ಜನ್ಯದಿಂದ ಪಾರಾಗಿ ಕಲ್ಕತ್ತೆ ಮುಟ್ಟಲು ಶೈಲನಿಗೆ ಸಾಕು ಸಾಕಾಗಿಹೋಯಿತು. ನಿರಾಶ್ರಿತರಿಗೆ ಮತ್ತು ಬರ್ಮದಿಂದ ಬಂದವರಿಗೆ ಸ್ಥಳದ ಏರ್ಪಾಡು ಮಾಡಿಕೊಡುವವರೆವಿಗೂ ನಗರ ಪ್ರವೇಶ ಮಾಡಬಾರದೆಂದು, ಸರ ಕಾರದವರು ; ಆಗ ಪ್ರತಿಬಂಧಕ ಹಾಕಿದರು. ಈ ನೆಪದಲ್ಲಿ ಸಂದೇಹಕ್ಕೆ ಕಾರಣ ರಾದ ಕೆಲವರನ್ನು ಬಂಧನದಲ್ಲಿಡಿಸಲು ಅವರು ಯೋಜನೆ ಮಾಡಿದರು. ಶೈಲನು ಅವರ ಕುತ್ತಿಗೆ ತುತ್ತಾದ.

ಇಲಾಖೆಯಿಂದ ತಂದ ಪ್ರಶಸ್ತಪತ್ರಿಕೆ, ಶೈಲನನ್ನು ಪಾರುಮಾಡಲು ಸಹಕಾರಿಯಾಯಿತು. ಪ್ರಯಾಣದ ಕೋಟೆಯಿಂದ ಪಾರಾಗಿ ಸ್ವಾತಂತ್ರ್ಯದ ಹಕ್ಕಿಯಂತೆ ಅವನು ಕಲ್ಕತ್ತೆ ಪ್ರವೇಶಿಸಿದ. ಈ ಮಹಾನಗರದಲ್ಲಿ ಇನ್ನು ಯಾವ ಬಗೆಯ ಕುತ್ತು ತನಗೆ ಕಾದಿದೆಯೋ ಎಂಬ ಭಯ ಅವನನ್ನು ನಡು ಗಿಸಿತು. ಮಾರ್ಪಾಡು ಹೊಂದಿದ ಕಲ್ಕತ್ತೆಯ ಮಹಾನಗರದಲ್ಲಿ ಶೈಲ ಯಾರು? ಅವನನ್ನು ಲಕ್ಷ್ಯಕ್ಕೆ ತರುವವರು ಯಾರು?

ದೇಶದ ಪ್ರಗತಿಗೂ ಸಾಮಾಜಿಕ ಬೆಳವಣಿಗೆಗೂ ವಿಘಾತುಕವಾದ ಪರಿ ಸ್ಥಿತಿ ಎಲ್ಲೆಲ್ಲೂ ಕಾಣುತಿತ್ತು. ಇಡೀ ನಗರದಲ್ಲಿ ಸೈನಿಕರ ಮೆರವಣಿಗೆಯನ್ನು ಶೈಲ ಕಂಡ. ಕೆಲವು ಸ್ನೇಹಿತರನ್ನು ನೋಡಿ, ಮಹೇಶನ ಪತ್ತೆಹಚ್ಚುವುದು ಸಾಧ್ಯವೆಂದು ನಂಬಿದ. ಅವರಿಂದ ಏನೂ ಪ್ರಯೋಜನವಾಗಲಿಲ್ಲ.

ನಿರಾಶ್ರಿತರ ತಂಡ ಹೇರಳವಾಗಿ ಕಲ್ಕತ್ತೆ ಸೇರಿತು. ಒಬ್ಬನ ವಿವರಣೆ ಯನ್ನು ಕೇಳಿದರೆ ಸಾಕು! ಎಷ್ಟು ಅತ್ಯಾಚಾರ! ಎಷ್ಟು ಕಷ್ಟನಷ್ಟಗಳ ಮಧ್ಯೆ ಸಿಲುಕಿ ಹಾಯ್ದು ಬಂದರೆಂದು ಗೊತ್ತಾಗುತ್ತಿದ್ದಿತು. ನೂರಾರು ಜನರು ಹಡಗಿನಲ್ಲಿ ಸ್ಥಳ ದೊರೆಯದೆ, ಕಾಲುನಡಿಗೆಯಲ್ಲಿಯೇ ಕಲ್ಕತ್ತೆಗೆ ಬಂದರೆಂದರೆ ಎಷ್ಟು? ಆಶ್ಚರ್ಯವಾಗುವುದು!

ಮಹೇಶನ ಹುಡುಕುವಿಕೆ ಭರದಿಂದ ಸಾಗಿತು. ಗೆಳೆಯರನ್ನೆಲ್ಲಾ ವಿಚಾ ರಿಸಿ ತಿಳಿದಾಯಿತು ಅವನು ಸಿಕ್ಕಲಿಲ್ಲ. ಸೈನಿಕ ಶಿಕ್ಷಣಕ್ಕೆ ಅಡ್ಡಿಮಾಡಿ, ಸೂಚನೆ ಮಾಡಿದೆ; ಎಷ್ಟು ವಿಷಯದಲ್ಲಿ ಈ ತರಹದ ಅಭಿಪ್ರಾಯ ಹೊರ ಬೀಳುವುದಿಲ್ಲ? ನನ್ನನ್ನು ಮರೆಯುವಂತಹ, ಅವನು ಭೇಟಿಯಾಗದಂತಹ ಅಪರಾಧವೇನು ನಡಿಸಿರುವೆ? ಭಾರತವನ್ನು ಸೇರಿದೊಡನೆಯೇ ನಿರಾಶೆ ಆವರಿಸಿ ಕೊಂಡಿದೆಯಲ್ಲಾ! ಎಂದು ಶೈಲನಿಗೆ ಅತಿ ದುಃಖವಾಯಿತು.

ಕಲ್ಕತ್ತೆಯಲ್ಲಿ ಸುತ್ತಾಡಿದ ನಂತರ ಅವನ ಜನ, ಅವನ ಊರು, ಕಲ್ಕತ್ತೆಯ ಸರ್ವತೋಮುಖದಲ್ಲಿ ಆರ್ಥಿಕ, ಸಾಂಸ್ಕೃತಿಕ ಅಭಿವೃದ್ಧಿ ಕೋರುತ್ತಿದ್ದ ಬಹುದಿನದ ಗೆಳೆಯನೊಬ್ಬನನ್ನು ಶೈಲ ಸಂಧಿಸಿದ. ಆದರ್ಶವಾದಿ ಶೈಲನನ್ನು ಕಂಡು, ಯೋಗಕ್ಷೇಮ ವಿಚಾರಿಸಿ, ತನ್ನ ಮನೆಗೆ ಕರೆದು ತಂದ. ಆದರಿಸುವವರು, ಸ್ನೇಹದಿಂದ ಕಾಣುವವರು, ಯಾರಾದರೂ ಸಿಕ್ಕಿದರೆ ಸಾಕೆಂದು ಅಲೆಯುತ್ತಿದ್ದ ಶೈಲ, ದೊರೆತ ಅಭ್ಯಾಗತನ ಮನೆ ಪ್ರವೇಶಿಸಿದ.

ಎರಡು ದಿನ ನಿಂತದ್ದಾಯಿತು. ಶೈಲನ ಗೆಳೆಯ ಶಾಂತಿಕಾಲದ ದೇಶಭಕ್ತಿ ಯುದ್ಧಕಾಲದ ದೇಶಭಕ್ತಿ ಕುರಿತು ವಿವರವಾಗಿ ತಿಳಿಸಿದ. 'ನಮ್ಮಲ್ಲಿಯೂ ದೇಶಭಕ್ತಿಯಿದೆ, ಬೇಕಾದ ಶಕ್ತಿಯೂ ಇದೆ, ಪಾರತಂತ್ರ್ಯದಿಂದ ಬಿಡಿಸಿಕೊಳ್ಳಲು ಯಾವ ದೇಶದವರಿಗೂ ಧೈರ್ಯವಿದ್ದೇ ಇರಬೇಕು! ನೋಡು ಶೈಲ! ನೀನು ಕಾಲೇಜು ಮುಗಿಸಿ, ಕೃಷಿಕ ಉದ್ಯೋಗವನ್ನು ಕೈಗೊಂಡಿದೀಯೆ ಅಂದರೆ, ಒಂದುಮಟ್ಟಿನ ಸ್ವಾತಂತ್ರ್ಯವೃತ್ತಿಯನ್ನು ಹಿಡಿದಿರುವೆ. ಓದಿ ಒಂದ ಕೆಲಸ ದೊರಕಿಸಿಕೊಳ್ಳಬೇಕೆಂದೂ, ಓದುವುದೇ ಕೆಲಸಕ್ಕೆಂದೂ ತಿಳಿಯುವುದು ತಪ್ಪು. ಕೆಲಸದ ಭೇಟಿ, ಒಂದು ಜೂಜು; ಆ ಜೂಜಿನಲ್ಲಿ ಗೆಲ್ಲುವವರು ಒಬ್ಬರೋ ಇಬ್ಬರೋ, ಉಳಿದವರಿಗೆ ಜೂಜಿನಲ್ಲಿ ಪಾತ್ರವಹಿಸಿದ ತೃಪ್ತಿ ಮಾತ್ರವಾಗುತ್ತದೆ. ಜನತೆಯ ಅಪಾರ ಸೇವಾಕ್ಷೇತ್ರ ಮುಂದಿರುವಾಗ, ಅದನ್ನು ಬಿಟ್ಟು ಮತಿಹೀನರಾಗಿ ಕೇವಲ ಅಲ್ಪದೃಷ್ಟಿಯಿಂದ ಹೀನವೃತ್ತಿ ಅವಲಂಬಿಸುತ್ತಿದಾರೆ! ಇದು ನನ್ನ ಅನುಭವದ ಮಾತು. ನಾಡಿನ ಬೆಳವಣಿಗೆಗೆ ದುಡಿಯಿರಿ! ಸಾಧಿಸಿರಿ! ನಿರ್ಮಾಣಕಾರ್ಯದಲ್ಲಿ ತೊಡಗಿರಿ! ಎಂದು ಬೋಧಿಸುತ್ತಿದ್ದವರೇ ನಮಗೆ ಎದುರಾಳಿಗಳಾಗಿದಾರೆ! ಅವರ ವ್ಯಕ್ತಿತ್ವ, ಮಹದಾಶೆ ಎಲ್ಲವೂ ಕಾಲೇಜಿನಲ್ಲಿ ಮಾತ್ರ ಹಾರಾಡುತ್ತಿದ್ದವು, ಈಗ ಅವೆಲ್ಲವೂ ಮಣ್ಣುಪಾಲಾಗಿದೆ. ಕಲ್ಕತ್ತೆಯಲ್ಲಿ ಸುತ್ತಾಡಿರುವ ನಿನಗೆ ನಾನು ಹೇಳಿದುದೆಲ್ಲ ನಿಜವೆಂದು ತಿಳಿದಿರಬೇಕು' ಎಂದು ಮುಗಿಸಿದ.

'ಇಂತಹ ಚರ್ಚೆಗೆ ಆಸ್ಪದ ಕೊಟ್ಟ ಗೆಳೆಯನೊಬ್ಬನನ್ನು ಕಳೆದುಕೊಂಡೆ, ನಾನು ಕಲ್ಕತ್ತೆಯಲ್ಲಿ ನಿಲ್ಲಲೊಪ್ಪುವುದಿಲ್ಲ; ಹೊತ್ತಿರುವ ಹೊರೆಯೇ ಬೇಕಾದಷ್ಟಿದೆ. ನೀನು ನಮ್ಮಿಬ್ಬರ ಗೆಳೆಯನಾದ ಮಹೇಶನನ್ನು ಬಲ್ಲೆಯಷ್ಟೆ! ಅವನು ನನಗೆಲ್ಲಿ? ಸಿಕ್ಕುವ ಹೇಳು, ಮಹದುಪಕಾರವಾಗುವುದು' ಎಂದು ಶೈಲ

ಕೇಳಿದ. ಶೈಲ ಮಾತು ಮುಗಿಸುವುದೊರೊಳಗಾಗಿ ಅವನ ಗೆಳೆಯ ಗಹಗಹಿಸಿ ನಗಲಾರಂಭಿಸಿದ. ಆತನ ನಡವಳಿಕೆ ಶೈಲನಿಗೆ ಸೋಜಿಗವನ್ನುಂಟುಮಾಡಿತು.

ನಗಲಾರಂಭಿಸಿದ ಗೆಳೆಯ, ಶಾಂತನಾದ. ಶೈಲನ ಮಾತಿಗೆ ಬದಲಾಗಿ 'ಪೂರ್ವ ಪೀಠಿಕೆಯಲ್ಲೇ ನಿನಗೆ ಸೂಚನೆ ಕೊಟ್ಟೆ. ಮತ್ತೊಮ್ಮೆ ಹೇಳುವೆ ಕೇಳು! ನಮ್ಮಿಬ್ಬರ ಗೆಳೆಯ ಮಹೇಶ, ಯುದ್ಧಕಾಲದ ದೇಶಭಕ್ತಿಗೆ ಪಾತ್ರನಾಗಿದ್ದಾನೆ, ಧೂಳುಬಣ್ಣದ ಬಟ್ಟೆಯನ್ನು ಧರಿಸಿ ಪ್ರಭುತ್ವ ನಡಿಸುತ್ತಿದಾನೆ!' ಎಂದು ವಿವರವಾಗಿ ಹೇಳಿದ.

ಕಲ್ಕತ್ತೆಯಲ್ಲಿ ಮಹೇಶನನ್ನು ಕಾಣುವದು ಸುಲಭವಲ್ಲವೆಂದು ಶೈಲ ಹತಾಶನಾದ. ಗೆಳೆಯನಿಂದ ತಿಳಿಯಬೇಕಾದುದು ತಿಳಿಯಿತು. ಕಲ್ಕತ್ತೆಯಲ್ಲಿ ನಿಂತುದರ ಫಲದಿಂದೇನೂ ಆಗಲಿಲ್ಲ. ನಿರಾಶೆಯಾಯಿತು. ಮಹದಾದ ಕರ್ತವ್ಯ ಮತ್ತೊಂದಿದೆ, ಆದಷ್ಟುಬೇಗ ಅದನ್ನು ಮುಗಿಸುವದೆಂದು, ಶೈಲ ಕಲ್ಕತ್ತೆ ಬಿಟ್ಟು ಹೊರಟ.

ಹೇಮಂತರು ವಹಿಸಿಕೊಟ್ಟ ಆಭರಣದ ಪೆಟ್ಟಿಗೆಯನ್ನು ಚೌಧುರಿಯವರ ವಶಕ್ಕೆ ಕೊಡುವದು ಮಾತ್ರ ಅವನಿಗೆ ಉಳಿದಿತ್ತು. ಈ ಭಾರವನ್ನು ಮುಗಿಸಿ, ಎಲ್ಲಿಯಾದರೂ ವೃತ್ತಿ ಶೋಧನೆ ಮಾಡಿಕೊಂಡು ನಿಲ್ಲುವ ಯೋಜನೆ ನಡಿಸುವುದೆಂದು ಮನಸ್ಸುಮಾಡಿದ. ಶೈಲನ ಪ್ರಯಾಣ ಒರಿಸ್ಸಾವಿಗೆ ಮುಂದುವರಿಯಿತು.

ಆಗ ಜಪಾನರು ಸಿಂಗಪುರವನ್ನು ಹಿಡಿದು ಮುಂದುವರಿದಿದ್ದರು. ರಂಗೂನ್ ನಗರ ಖಾಲಿ ಮಾಡಲಾಗಿದೆಯೆಂಬ ಸುದ್ದಿ ,ಭಾರತ ಮುಟ್ಟಿತು. ಈ ಧಾಳಿ ದವಡೆಯಲ್ಲಿ ಎಲ್ಲರೂ ಸೇರಿಹೋಗಿದ್ದಾರೆಂದು ಶೈಲ ತಿಳಿದುಕೊಂಡ. ಒಳದೇಶದಲ್ಲಿ ಸ್ಥಿತಿ ಅಲ್ಲೋಲಕಲ್ಲೋಲವಾಗಿದೆ, ಹೇಮಂತರು ಭಾರತ ಸೇರುವರೊ ಇಲ್ಲವೋ ತಿಳಿಯದು. ಅಬುಜದತ್ತರ ಸಂಗತಿಯೇ ತಿಳಿಯುತ್ತಿಲ್ಲ. ಈ ತಾರುಮಾರಿನಲ್ಲಿ ಏನು ಮಾಡುವದು? ಎಂದು ಶೈಲ ಕಟಕ್ ನಗರಕ್ಕೆ ಬಂದ.

ಫಲವತಾದ ಒರಿಸ್ಸಾ ಪ್ರವೇಶ ಮಾಡಿ, ಕಟಕ್ ನಗರದಲ್ಲಿ ಶೋಧನೆಗೆ ಆರಂಭಿಸಿದ. ಶ್ರೀಮಂತರ ಶ್ರೇಣಿಯಲ್ಲಿ ಅಲೆದುದು ವ್ಯರ್ಥವಾಯಿತು. ಸ್ನೇಹಿತರಾಗಲೀ ಬಂಧುಗಳಾಗಲೀ ದೊರೆಯದ ಪ್ರದೇಶದಲ್ಲಿ ಒಬ್ಬರನ್ನು ಪತ್ತೆ

ಹಿಡಿಯುವುದು ಎಷ್ಟು ಕಷ್ಟ! ಚೌಧುರಿಯವರ ಸೌಧ, ಕೊನೆಗೆ ಶೈಲನಿಗೆ ಪತ್ತೆ ಯಾಯಿತು. ಬೇಕಾದಷ್ಟು ಮಂದಿ ಸೇವಕರು ಅಲ್ಲಿ ಓಡಾಡುತ್ತಿದ್ದರು. ವಯಸ್ಸು ಮಿಾರಿದ ದೀರ್ಘಕಾಯ ಮಹಾಶಯರಾದ ಚೌಧುರಿಯವರು ಮಾತ್ರ ದೃಷ್ಟಿಗೆ ಬೀಳಲಿಲ್ಲ. ಅವನು ಸೌಧ ತಲುಪಿದಾಗ ಸೇವಕರೆಲ್ಲಾ ಬಂದು ಮುತ್ತಿದರು. ರಂಗೂನಿನಿಂದ ಬಂದಿರುವುದಾಗಿ ಶೈಲ ನುಡಿದಾಗ, ಮುತ್ತಿದ್ದವ ರೆಲ್ಲಾ ದೂರ ಸರಿದುಬಿಟ್ಟರು. ಅವರ ನಡತೆಯನ್ನು ಕಂಡ ಶೈಲನಿಗೂ ವಿಸ್ಮಯ ವಾಯಿತು. 'ಇಲ್ಲಿ ನಾನು ನಿಲ್ಲುವುದಕ್ಕೆ ಬರಲಿಲ್ಲ, ಪ್ರಯಾಸದಿಂದ ಬಂದವನು ಚೌಧುರಿಯವರನ್ನು ಕಾಣಲು ಬಂದೆ; ನಿಮ್ಮ ಸಹಾಯ ಒಂದೂ ನನಗೆ ಬೇಡ' ಎಂನು ಶೈಲ ತಿಳಿಸಿದಾಗಲೇ, ಸೇವಕನೊಬ್ಬನು 'ಚೌಧುರಿಯವರು ನಗರದಲ್ಲಿಲ್ಲ' ಎಂದು ಮುಗಿಸಿದ.

'ನಗರದಲ್ಲಿಲ್ಲ' ಎಂಬ ಮಾತು ಕೇಳಿದ ಶೈಲ ಕುಸಿದುಬಿದ್ದ. ಭಾರತ ಮುಟ್ಟಿದಂದಿನಿಂದಲೂ ನಿರಾಶೆಯು ನನ್ನನ್ನು ಬೆನ್ನಟ್ಟಿ ಬಂದಂತಿದೆ. ಕಟಕ್ ನಗರಕ್ಕೆ ಬಂದಾಗಲೂ ಮಹೇಶನನ್ನು ಹುಡುಕಿದ ಮಾದರಿಯಂತಾಯಿತು. 'ನಗರದಲ್ಲಿಲ್ಲ' ಎಂಬ ಅತಿ ಸುಲಭವಾದ ಉತ್ತರ ನನಗೆ ದೊರೆಯಿತು. ಹೀಗೆ ಸೇವಕರು ನುಡಿದುದೂ ಒಂದು ಭಾಗದಲ್ಲಿ ಉತ್ತಮ, ಈ ಸಂಶಯಾವರ್ತಿಗಳಿಗೆ ನನ್ನಲ್ಲಿರುವ ಅಮೂಲ್ಯವಾದ ಪೆಟ್ಟಿಗೆಯ ಸುಳಿವು ಗೊತ್ತಾದರೆ ಸಾಕು! ಹಾನಿ ಯಾಗುವುದೆಂದು ಬೆದರಿ, ಶೈಲ ಅಲ್ಲಿಂದ ಪಾರಾದ.

ಚಿಂತಿಸಿ ಮಾಡಬಹುದಾದ ಕೆಲಸ ಮುಗಿಯಿತು. ನಿರಾಶೆಯ ಹರಣ ಸಾಕು! ತಳ ಕಾಣದ ಕತ್ತಲ ಭಾವಿಯಂತೆ, ವಿಷಯವೂ ಯೋಚಿಸಿದಷ್ಟು ಘಾಡವಾಗುತ್ತಿದೆ. ನನ್ನ ಹೊಣೆ, ಅಧಿಕವಾಗಿದೆ; ಅಧೈರ್ಯನಾಗಿ ಕುಳಿತರೆ ಏನು ಪ್ರಯೋಜನವಾದೀತು? ಎಂದು ಶೈಲ ಉದ್ಯೋಗದ ಚಿಂತೆ ಮಾಡಿದ. ಕೆಲಸದಲ್ಲಿ ನಿಂತು, ಚೌಧುರಿಯವರ ನೆಲೆಯನ್ನು ಗೊತ್ತುಮಾಡುವುದು ಎಂದು, ಮುಂದುವರಿದ.

ಆಗ, ಅಖಿಲ ಭಾರತ ಕಾಂಗ್ರೆಸ್ ಸಮಿತಿ, ಬೊಂಬಾಯಿಯಲ್ಲಿ ಸೇರಿತ್ತು. ಯುರೋಪಿನಲ್ಲಿ ಘೋರವಾಗಿ ಯುದ್ಧ ನಡಿಸುತ್ತಿದ್ದ ಮಿತ್ರರಾಷ್ಟ್ರದವರು, ಪ್ರಾಚ್ಯದಲ್ಲಿಯೂ ಜಪಾನಿನೊಂದಿಗೆ ಹೋರಾಟ ನಡಿಸುತ್ತಿದ್ದರು. ಕಾಂಗ್ರೆಸ್,

ಆಗಸ್ಟ್ ಒಂಬತ್ತರ ನಿರ್ಣಯ 'ಕ್ವಿಟ್ ಇಂಡಿಯಾ' ಠರಾವು ಬ್ರಿಟಿಷರ ಧೃತಿ ಕೆಡಿಸಿತು. ಮುಖಂಡರ ಬಂಧನ, ರಾಷ್ಟ್ರದಲ್ಲಿ ಪ್ರತಿಭಟನೆ ಎಲ್ಲವೂ ಮೊದಲಾಯಿತು. ದುರಂತವನ್ನು ನೋಡುತ್ತಾ ಶೈಲ ಒರಿಸ್ಸಾವಿನಿಂದ ಬೊಂಬಾಯಿಗೆ ಬಂದ.

ಹಾದಿಯಲ್ಲಿ ಕಂಡ ಕರಾಳ ದೃಶ್ಯಗಳು, ಅವನನ್ನು ಬೆರಗುಗೊಳಿಸಿತು. ದಹಿಸಿಹೋದ ನಿಲ್ದಾಣ, ಮುರಿದುಬಿದ್ದ ಸೇತುವೆ, ಶಿಥಿಲವಾದ ರೈಲ್ವೆ ಮಾರ್ಗ, ಎಡೆಬಿಡದೆ ಸುರಿಯುತ್ತಿದ್ದ ಗುಂಡಿನಮಳೆ, ಎಲ್ಲಕ್ಕೂ ವಿಸ್ತರಿಸಿದ ಭಾರತ ರಕ್ಷಣಾ ಕಾನೂನು ಸಾಸಿರ ನಾಲಿಗೆಯಿಂದ ಸೆಳೆಯುತ್ತಿದ್ದ ಜೀವಿಗಳ ಅಸ್ತವ್ಯಸ್ಥತೆಯನ್ನು ಕಂಡು ಶೈಲ; ದಿಕ್ಕುಕಾಣದೆ ಹೋದ. ಈ ದೌರ್ಜನ್ಯ ಕೃತ್ಯಗಳಿಗೆ ನಾನು ಭಾಗಿಯಲ್ಲ ; ಪ್ರತಿ ಭಾರತೀಯನಿಗೂ ಸ್ವಾತಂತ್ರ್ಯಯುದ್ಧದಲ್ಲಿ ಭಾಗವಹಿಸಲು ಅಧಿಕಾರವಿದೆ, ಕರ್ತವ್ಯವೂ ಅವನದಾಗಿದೆ. ಈ ಕ್ರೂರಕೃತ್ಯಗಳಿಗೆ ಅವನು ಭಾಗಿಯಾಗಕೂಡದು. ರಾಜಕೀಯದಲ್ಲಿ ಪ್ರವೇಶಿಸಲು ನನಗೆ ಅನುಮತಿಯಿಲ್ಲ. 'ನೀನು ಸರ್ಕಾರಿ ಅಥವಾ ಖಾಸಗೀ ಉದ್ಯೋಗದಲ್ಲಿ ನಿಲ್ಲು, ಮನೆತನದ ಗೌರವಕ್ಕೆ ಕುಂದು ತರಬೇಡ' ಎಂಬ ದತ್ತರ ಹಿತವಚನ ಶೈಲನನ್ನು ಎಚ್ಚರಿಸಿತು. ಸರ್ಕಾರದ ಅಧಿಕಾರದಲ್ಲಿದ್ದು ಅನುಭವ ಪಡೆದುದಾಗಿದೆ, ಅವರ ಸೇವಾವೃತ್ತಿ ನನಗೆ ಬೇಕಿಲ್ಲ, ಖಾಸಗೀಯೊಬ್ಬನಲ್ಲಿ ನಾನು ಜೀತನಾಗಿ ಬಾಳಿದರೂ ಸರಿಯೆ ! ಎಂದು ತೀರ್ಮಾನಕ್ಕೆ ಬಂದ.

೧೪

ಕಿಸೆಯಲ್ಲಿದ್ದ ಹಣ ಅರ್ಧಭಾಗದಷ್ಟು ಖರ್ಚಾಗಿದ್ದಿತು. ಅಲೆದಾಡಿದ ಜೀವ, ಶಾಂತಿನೆಲೆಯೊಂದನ್ನು ಕೋರುತ್ತಿತ್ತು. ಬೊಂಬಾಯಿಯಿಂದ ಅವನ ಪ್ರಯಾಣ ಮದರಾಸಿಗೆ ಬಂದು ನಿಂತಿತು. ಹಿಂದೆ, ದೀಪದಿಂದ ಬೆಳಗುತ್ತಿದ್ದ ಈ ಮಹಾನಗರ ಕತ್ತಲಲ್ಲಿ ತಲೆಮರೆಸಿಕೊಂಡ ಹಾಗೆ ಅವನಿಗೆ ಕಾಣಬಂತು. ಶೂನ್ಯವಾತಾವರಣದ ನೆಲೆಯು, ನಿರಾಶೆಯಲ್ಲಿದ್ದ ಶೈಲನಿಗೆ ಪ್ರೋತ್ಸಾಹಕರವಾಗಿ ಕಾಣಲಿಲ್ಲ.

ಪಶ್ಚಿಮ ಘಟ್ಟಗಳ ಮತ್ತು ಮದರಾಸು ಪ್ರಾಂತ್ಯದಲ್ಲಿರುವ ನೀಲಗಿರಿ, ಬೇಸಿಗೆಯ ರಾಜಧಾನಿಯೆಂದು ಹಿಂದೆ ಕೇಳಿದ್ದ. ಅಲ್ಲಿ ನಿಲ್ಲಲು ಅವನ ಮನಸ್ಸು

ಒಪ್ಪಿತು. ಪೈರು ಪಚ್ಚೆಗಳಿಗೆ ಹೆಸರಾದ ಭೂಮಿಯಲ್ಲಿ, ಅನೇಕಾನೇಕ ಭಾರತೀಯ ಸಂಸ್ಥಾನೀಕರು, ಅರಮನೆಗಳನ್ನು ಕಟ್ಟಿ, ಉದ್ಯಾನವನಗಳನ್ನು ನಿರ್ಮಿಸಿ ವಾಸಿಸುವ ಜಾಗ ಶೈಲನಿಗೆ ಒಪ್ಪಿಗೆಯಾಯಿತು.

ವರ್ಷದಲ್ಲಿ ಕೆಲವು ತಿಂಗಳು ಮಾತ್ರವೇ ಅರಮನೆಯಂತಿರುವ ಸೌಧದಲ್ಲಿ ಅವರು ವಾಸಿಸುತ್ತಾರೆ. ಸೌಧದ ಪಾಲನೆಗಾಗಿ ವಿಶೇಷ ಖರ್ಚುಮಾಡುತ್ತಾರೆ ನನ್ನ ವೈಯುಕ್ತಿಕ ಪ್ರತಿಭೆ ಇಲ್ಲಿ ತೋರಬಹುದು. ಕೇವಲ ಸ್ವಾರ್ಥಪರರ ವಶವಾಗದೆ ಉದ್ಯೋಗ ನಡಿಸಿಕೊಳ್ಳಬಹುದು. ಈ ತಾವಿನಲ್ಲಿ ಆಶ್ರಯವೊಂದು ಸಿಕ್ಕಬೇಕು! ಎಂದು ಎಣಿಸಿಕೊಂಡ ಶೈಲ. 'ಸ್ವೇಚ್ಛಾವಿಹಾರಿಗಳು ನನ್ನನ್ನೆಲ್ಲಿ ಲೆಕ್ಕಿಸುವರು?' ಎಂದು ಉದಾಸೀನಭಾವದಿಂದಲೇ ನೀಲಗಿರಿಗೆ ಬಂದ.

ಈ ಮೋಜುಗಾರರ ಮಂದಿರದಲ್ಲಿ ಬಾಳಿನ ಜೀವವನ್ನು ಮುಂದುವರಿಸಲು ಸಾಧ್ಯವೇ? ಎಂಬ ಸಂದೇಹ ಶೈಲನನ್ನು ಬಾಧಿಸಿತು. ಆದರೆ ನೀಲಗಿರಿಯ ಕ್ಷೇತ್ರ, ತನ್ನನ್ನು ಅತ್ಯುನ್ನತಸ್ಥಿತಿಗೆ ಒಯ್ಯಲು ಸಹಾಯವಾಗುವುದೆಂದು ಅವನಿಗೆ ತೋರಿತು. ದುಡಿಯಲು ಮನಸುಳ್ಳವನಿಗೆ, ಬೇಕಾದಷ್ಟು ಭೂಮಿ ಯಿದೆ, ಯೋಚನೆ ನಡಿಸುವಾಯೆಂದು ಬಂದ.

ಸಾಹಸಿಯಾದ ಶೈಲ, ಇತರರನ್ನು ವಿಚಾರಿಸಿ ಕಾರ್ಯ ಸಾಧಿಸಿಕೊಂಡ. ವೈಶಿಷ್ಟ ಗುಣದಿಂದ, ಪ್ರಶಸ್ತಪತ್ರಿಕೆಯಿಂದ ಕೈಗೊಂಡ ಉದ್ಯಮದಲ್ಲಿ ಸಹಾಯ ಪಡೆದ. ಶೈಲನ ಉದ್ದೇಶದಂತೆ, ನೀಲಗಿರಿಯ 'ಗ್ಲೇವ್ಯೂ' ಸೌಧದಲ್ಲಿ ವೃತ್ತಿ ದೊರೆಯಿತು.

'ಗ್ಲೇವ್ಯೂ' ಅರಸನ ಮುಖ್ಯಾಧಿಕಾರಿಯೊಬ್ಬ, ಆಡಳಿತ ನಡಿಸಲು ತಕ್ಕವ ನಾದ ತೋಟಗಾರನನ್ನು ಹುಡುಕುತ್ತಿದ್ದ. ಉದ್ಯೋಗಕ್ಕಾಗಿ ಅಲೆಯುತ್ತಿದ್ದ ಶೈಲ, 'ಗ್ಲೇವ್ಯೂ' ಪ್ರವೇಶಿಸಿ ಬಂದ. ಪೂರ್ವವಿವರಣೆ, ಪ್ರಶಸ್ತಪತ್ರಿಕೆಯನ್ನು ಕಂಡ ಅಧಿಕಾರಿ, ಶೈಲನನ್ನು ಕೆಲಸಕ್ಕೆ ನಿಯಮಿಸಿಕೊಂಡ. ವ್ಯಕ್ತಿಮಾತ್ರ ಅವಶ್ಯಕವಾಗಿದ್ದ ಅಧಿಕಾರಿಗೆ, ವಿವರಣೆ ಹೆಚ್ಚಾಗಿ ಬೇಕಾಗಿರಲಿಲ್ಲ. ಬೆಟ್ಟಗುಡ್ಡ ಗಳ ಶ್ರೇಣಿಯಲ್ಲಿ ನಿಂತು 'ಗ್ಲೇವ್ಯೂ' ಹಿಂದೆ ಉದ್ಯೋಗಿಗಳಿಗಾಗಿದ್ದ ಮನೆಗ ಳೊಂದರಲ್ಲಿ ಶೈಲ ಇಳಿದುಕೊಂಡ.

ಯೋಗ್ಯವಾದ ಭೂಮಿ, ಕೊರತೆಯಿಲ್ಲದ ತಾವು, ಸಹಾಯಕ್ಕೆ ಒದಗು ತ್ತಿದ್ದ ಆಳುಕಾಳುಗಳು, ದೊರೆತಾಗ ಶೈಲನಿಗೆ ಬಹಳ ಆನಂದವೆನಿಸಿತು. ಅವನು

ಶ್ರಮವಹಿಸಿ ದುಡಿಯಲಾರಂಭಿಸಿದ. 'ಗ್ಲೇವ್ಯೂ' ಅರಸರ ಭವನದಲ್ಲಿ ಸಂಸ್ಥಾನದವನೇ ಆಗಿದ್ದ ಸಹಾಯಕನೊಬ್ಬ ಶೈಲನಿಗಿದ್ದ. ಅವನು ಒಟ್ಟು ಉಸ್ತುವಾರಿ ನೋಡಿಕೊಳ್ಳಲು ಅಸಮರ್ಥನಾದುದರಿಂದ, ಅಧಿಕಾರಿ ಯೋಗ್ಯನೊಬ್ಬನನ್ನು ನಿಯಮಿಸಬೇಕಾಯಿತು. ಶೈಲ ಬಂದು, 'ಗ್ಲೇವ್ಯೂ' ಸೌಧದಲ್ಲಿ ನಿಂತ.

ಶೈಲನಿಗೆ ಸೋಮಯ್ಯನೆಂಬ ಸಹೋದ್ಯೋಗಿಯೊಬ್ಬನಿದ್ದ. ಅವನು 'ಗ್ಲೇವ್ಯೂ' ಭವನವನ್ನು ತನ್ನ ಆಶೆಯದೀಪವನ್ನಾಗಿ ಮಾರ್ಪಡಿಸಿಕೊಂಡಿದ್ದ.

ಮುಪ್ಪಿನ ಚಿಂತೆಯಲ್ಲಿ ಇರಬೇಕಾದವನು, ಅಧಿಕ ಸಂಪಾದನೆಯಲ್ಲಿ ಮನಸ್ಸಿಟ್ಟು, ತರಕಾರಿ ವ್ಯವಸಾಯದಲ್ಲಿ ಭಾಗಿಯಾಗಿದ್ದ ಸೋಮಯ್ಯ. ಹೂದೋಟದ ವಿಚಾರಣೆಯನ್ನು ತೆಗೆದುಕೊಂಡು ಶೈಲಾ ಬೆಳೆಯಲಾರಂಭಿಸಿದ. ಮಿಕ್ಕೆಲ್ಲ ಸಂಬಂಧ ಅವನಿಗೆ ಬೇಕಾಗಿರಲಿಲ್ಲ. ಮಾನವನಿಗೆ ಬದುಕಲಿಕ್ಕೆ ಅಶನ ಬೇಕಲ್ಲವೆ, ಅಶನಕ್ಕಾಗಿ ಅವನ ಬದುಕು ಅಲ್ಲ, ಬದುಕಿನಗುರಿಯು ಮಹೋನ್ನತಿ ಅವನಿಗಿರಬೇಕು. ಸುಜ್ಞಾನ, ಶಿಕ್ಷಣ ಪ್ರಧಾನವಾದ ಸಾಹಿತ್ಯ ಚರ್ಚೆಗಳಿಲ್ಲವೆ, ನಡೆಯಲು ಅಸಾಧ್ಯ ಎಂದು ಶೈಲ ತಿಳಿದಿದ್ದ. ಶೈಲನ ಗುರಿಯಿಂದ ಬಹಳ ದೂರವಾಗಿರುತ್ತಿದ್ದ ಸೋಮಯ್ಯನಿಗೆ ಯಾವುದೂ ಬೇಕಾಗಿರಲಿಲ್ಲ.

ಪ್ರೌಢ ಕಲೆಗಳ ಪರಿಚಯವಿಲ್ಲದ ಸೋಮಯ್ಯನಿಗೆ, ಶೈಲನ ತತ್ವದಲ್ಲಿ ನಂಬಿಕೆಯಿರಲಿಲ್ಲ. ಅಶನಕ್ಕಾಗಿ ಅವನು ದುಡಿಯುತ್ತಿದ್ದ, ಅಲ್ಲದೆ ಗಳಿಸುದೆಲ್ಲವನ್ನೂ ಕೂಡಿಟ್ಟು ಕಾರ್ಪಣ್ಯ ಜೀವನ ನಡಿಸುತ್ತಿದ್ದ. ಯಾವ ಔದ್ಯೋಗಿಕ, ವಿದ್ಯಾಪರಿಣಿತ, ಬದುಕಿನಲ್ಲಿ ಮಾತ್ರ ಮನಸ್ಸಿಟ್ಟು ಮುಂದುವರಿದಾನು? ಆತನ ಜ್ಞಾನಸಂಪತ್ತು, ರಾಜಕೀಯ, ಸಾಮಾಜಿಕ, ದೃಷ್ಟಿ ಬೆಳೆದೀತು? ನನ್ನ ಬದುಕು ಅಶನಕ್ಕಾಗಿಯೇ ಆಗಬಾರದು, ಸಹಕಾರಿಯಾದ ವಿದ್ಯಾರ್ಜನೆಗೂ ಆಗಬೇಕೆಂದು ಶೈಲ ಸಾಹಸ ನಡಿಸುತ್ತಿದ್ದ.

ಸೌಧ ಕಟ್ಟಿಕೊಂಡು, ಮೋದದಿಂದ ಕೃತ್ರಿಮವೂ, ಡಾಂಭಿಕವೂ, ಆದ ಜೀವನವನ್ನು ನಡಿಸುತ್ತಿರುವ ಅರಸರಿಗೆ; ಸಂಪತ್ತಿನ ಕಡೆಗೆ ಗಮನವಿರುವುದಿಲ್ಲ. ರಾಷ್ಟ್ರವಲ್ಲಿ ದುಡಿತದಿಂದ ತುಂಬಿದ ಕೋಶಾಗಾರವಿದೆ. ಈ ಅರಸರ ಜೀವನ ಇದರಿಂದ ಪೂರೈಸುತ್ತದೆ. ಜೀವನದ ಸರ್ವಸ್ವವೇ ಹಣವೆಂದು ಬಗೆದಿದ್ದ ಸೋಮಯ್ಯ, ಸೌಧದಲ್ಲಿ ಬೆಳೆದ ಹಣ್ಣು ಕಾಯಿಗಳನ್ನು ವಿಕ್ರಯಿಸಿ ತನ್ನ

ಭಂಡಾರ ತುಂಬುತ್ತಿದ್ದ. ಮೇಲಾಗಿ ಸಂಸ್ಥಾನೀಕರ ಕಡೆಯವನು, ದೊರೆಯುವ ಸಂಪತ್ತಿನ ಕಡೆಗೆ ಅವರ ಲಕ್ಷ್ಯವಿಲ್ಲ. ನಾನು ಮಾಡುವುದೇನು? ಎಂದು ಶೈಲ ಸುಮ್ಮನಾದ. ಆದರ್ಶದ ಆಕರ್ಷಣೆ ಶೈಲನದಾಗಿಯೂ, ಕಾಂಚಣದ ಶೇಖರಣೆ ಸೋಮಯ್ಯನದಾಗಿಯೂ, 'ಗ್ಲೆವ್ಯೂ' ಅಲ್ಲಿ ನಡೆಯುತ್ತಿತ್ತು.

ದೇಶದಲ್ಲಿ ಜೀವ ಉಳಿಸಿಕೊಳ್ಳಬೇಕೆಂಬ ಗಾಬರಿಯಲ್ಲಿ ಜನರು ಕಕ್ಕಾವಿಕ್ಕಿಯಾಗಿ ಹೋಗಿದ್ದರು. ಶೋಚನೀಯ ವರ್ತಮಾನಗಳು ಭಾರತಕ್ಕೆ ಮುಟ್ಟುತ್ತಿದ್ದವು. ಹೊಟ್ಟೆಗಿಲ್ಲವೆಂಬ ಕೂಗು, ಬಂಗಾಳದಿಂದ ಬಂದ ಆರ್ತನಾದ, ಇಡೀ ಲೋಕವನ್ನೇ ತುಂಬಿತು. ಬೆಳೆದುದನ್ನು ಸುಟ್ಟು, ಬರಿದು ಮಾಡಿ, ಮುಂದು ವರಿದು ರಷ್ಯನರು ಪಲಾಯನ ಮಾಡುತ್ತಿದ್ದಾಗ, ಪರಕೀಯರ ಆಡಳಿತದಲ್ಲಿ ಆಳಾಗಿ ಬಾಳುವ ನಮಗೆ ಈಗ ಕೂಳಿಗೂ ಸೊನ್ನೆಯಾಗುತ್ತಿದೆ! ಎಂದು ಜನರು ತಿಳಿದುಕೊಂಡರು. ಸ್ವಾರ್ಥಿಗಳು! ಹೇಡಿಗಳು! ರಾಕ್ಷಸೀ ಮಹತ್ವಾಕಾಂಕ್ಷಿಗಳಿಂದ ನಮಗಾಗುತ್ತಿರುವ ಹಿಂಸೆ ಅಷ್ಟಿಷ್ಟಲ್ಲ! ಕೂಳಿನ ಕಣಜ ಭರ್ತಿ ನೋಡಿಕೊಳ್ಳುವುದು ಕೃಷಿಕನ ಉದ್ಯೋಗ! ಅಜ್ಞಾನದ ಭೂತಗಳಿಗೆ ರಾಕ್ಷಸೀ ವಿದ್ಯೆ,-ಹೋರಾಟ ಕಲಿಸಿ ಎಲ್ಲೆಲ್ಲಿಯೂ ಜಾಡ್ಯ ತುಂಬಿರುವದನ್ನು, ಶೈಲ ತಿರಸ್ಕಾರ ಮಾಡಿದ. ಆಹಾರ ಬೆಳೆಯುವ ಕೃಷಿಕ, ನೇಗಲಿಗೆ ಬದಲಾಗಿ ಕತ್ತಿ ಹಿಡಿದು ನಿಂತ, ಕೂಳಿನ ಕಣಜದ ಯೋಚನೆ ಯಾರಿಗೇನು? ಸ್ವಾರ್ಥಿಗಳಿಗೆ ಆಳಿನ ಚಿಂತೆ ಏಕೆ? ಎಲ್ಲಿಯೂ ಕೊರಗು! ಎಲ್ಲಿಯೂ ಮರುಕ! ಎಲ್ಲೆಲ್ಲಿಯೂ ಅನ್ನದ ಅಧಿಷ್ಠಾನದ ಕೂಗು ಕೇಳಿಬರುತ್ತಿದೆ. ನಾನು ಅನ್ನದ ಆಗಾರದಲ್ಲಿದ್ದರೂ ಮರುಕದ ಕೂಗನ್ನು ಕೇಳುತ್ತಿರುವೆ, ಅನ್ನದಾತಾ! ನಿನ್ನ ಮಹಿಮೆಯನ್ನು ಜನರು ಅರಿತರು, ಕೂಳಿನ ಕಣಜವನ್ನು ಮುಂದೆ ಎಂದೂ ದುರ್ಲಕ್ಷ್ಯದಿಂದ ಕಾಣರು ಎಂದು ನೆನೆದ ಶೈಲ.

ನನಗೆ ಹೂ ಬೆಳವಣಿಗೆಯಿಂದ ಅಷ್ಟು ಲಾಭವಿಲ್ಲ, ಹಣ್ಣು ಕಾಯಿಗಳ ಬೆಳಸೇ ಸಾಕೆಂದು ಸೋಮಯ್ಯ ಕೋರುತ್ತಿದ್ದ. ಸ್ವಾರ್ಥಸಾಧಕನ ಮುಂದೆ, ಶೈಲನೊಬ್ಬ 'ಗ್ಲೆವ್ಯೂ' ಸೌಧದಲ್ಲಿದ್ದುದು ಸೋಮಯ್ಯನಿಗೆ ಕಷ್ಟವಾಯಿತು. ಸೋಮಯ್ಯನ ಈ ಅಂತರ್ಯ ತಿಳಿಯಲು, ಶೈಲನಿಗೆ ಬಹಳ ದಿನ ಬೇಕಾಗಲಿಲ್ಲ.

ಅನಾಯಕತೆ, ಅವಾಂತರಗಳು, ಉಪಟಳಗಳು, ಯಾವುದೂ 'ಗೇವ್ಯೂ' ಅಲ್ಲಿರಲಿಲ್ಲ. ಪರವೋದ್ದೇಶಉಳ್ಳ ಶೈಲನ ಪ್ರಭುತ್ವಕ್ಕೆ ಎದುರಾರು?

'ಡೆಹರಾಡೂನ್, ಡಾರ್ಜಿಲಿಂಗ್, ಅಸ್ಸಾಂ ಪ್ರದೇಶಗಳಲ್ಲಿ ಜೇನು ಸಾಕುವಿಕೆಯ ಪ್ರಯೋಗಶಾಲೆಗಳಿವೆ. ನಾನು ಎಲ್ಲವನ್ನೂ ನೋಡಿ ಬಂದಿದ್ದೇನೆ. ಅಮೃತದಂತಹ ಜೇನುತುಪ್ಪವನ್ನು ತಿಂದು, ಆರೋಗ್ಯವಂತರಾಗಿ ಬಾಳುವ ಬಯಕೆ ಜನರಿಗಿದೆ' ಎಂದು ಶೈಲ ಸೋಮಯ್ಯನಲ್ಲಿ ವಿವರಿಸಿ, ಮಧುಶಾಲೆಯೊಂದನ್ನು ತೆರೆಯುವ ಸೂಚನೆ ಮಾಡಿದ.

ಆರಂಭಕ್ಕೆ ಪೂರ್ವದಲ್ಲೇ, ಸೋಮಯ್ಯ ಬೆಂಬಲಕೊಡುವುದಾಗಿ ಹೇಳಿದ; ಅಧಿಕ ಸಂಪಾದನೆಯಾಗುವುದೆಂಬ ದೃಷ್ಟಿಯಿಂದ ಅವನು ಒಪ್ಪಿಗೆ ಕೊಟ್ಟ. 'ನಮ್ಮಲ್ಲಿ ಕಾಡಿಗೇನು ಕೊರತೆ? ಕಾಡುಯಿದ್ದ ಮೇಲೆ ಹೂಗಳಿಗೇನು ಕಡಿಮೆ? ಜೇನುತುಪ್ಪದ ಪೂರೈಕೆ ಆದಂತೆಯೇ ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ಜೇನು ಸಾಕಿ ಸಂಸ್ಥೆ ನಡೆಸುತ್ತಿದ್ದಾರೆ' ಎಂದು ಶೈಲ ಜೇನು ವ್ಯವಸಾಯದ ವಿವರಣೆ ಮುಗಿಸಿ, ಸೋಮಯ್ಯನ ಒಪ್ಪಿಗೆ ಪಡೆದನೆಂದು ಸಂತೋಷದಲ್ಲಿದ್ದ.

'ಜೇನುತುಪ್ಪಕ್ಕೆ ನಿತ್ಯವೂ ಹೊಸ ಹೊಸ ಗಿರಾಕಿಗಳು ಸಿಕ್ಕುತ್ತಾರೆ!' ಎಂದು ಸೋಮಯ್ಯ ತನ್ನಾಶೆಯನ್ನು ಪ್ರತ್ಯಕ್ಷವಾಗಿ ಶೈಲನೊಂದಿಗೆ ನುಡಿದ.

ಮಧು ಶೇಖರಣೆಯಾಗುತ್ತ ಬಂದಿತು. ವಂಶಪಾರಂಪರ್ಯವಾಗಿ ನಮ್ಮವರು ತೋಟಗಾರರಾಗಿದ್ದಾರೆ. ಶೈಲ ಹೊಸಬ, ಇವನನ್ನು ಲಕ್ಷ್ಯಮಾಡುವುದೇನು? ಎಂದು ತಾತ್ಸಾರದಿಂದ ಸೋಮಯ್ಯನಿರುತ್ತಿದ್ದ. ತೋಟಗಾರ ಕಲಿತವನು, ಪ್ರಯೋಗವನ್ನೂ ನಡೆಸುತ್ತಿದ್ದಾನೆ, ಎಂಬ ವಿಷಯ ಸೋಮಯ್ಯ ಯೋಚಿಸಿ ಭೀತನಾದ. ಸಾಮಾನ್ಯವಾಗಿ ಶೈಲನನ್ನು ಹೊಗಳುತ್ತಿದ್ದವನು, ಅವನನ್ನು ಕಂಡಾಗ ಹಿಂಜರಿಯುತ್ತಿದ್ದ. ಬೆಳೆದು ಬಂದ ನೈಶ್ಚಿಕಮನೋವೃತ್ತಿ, ಸೋಮಯ್ಯನನ್ನು ಬಲವಾಗಿ ಬಾಧಿಸಿತು.

ಪುಷ್ಪ, ಫಲಗಳು ಸೌಧದಲ್ಲಿ ಹೆಚ್ಚಿನ ವೈಖರಿಯಿಂದ ಕಂಗೊಳಿಸುತ್ತಿತ್ತು. 'ನನಗಿಂತಲೂ ಕಿರಿಯವನೊಬ್ಬನು ಅಧಿಕಾರ ಹಿಡಿದು ಇಲ್ಲಿ ನಿಂತಿರುವ. ಅವನ ಸಾಮರ್ಥ್ಯ ಕಂಡುಕೊಂಡ ನನಗೆ ಭೀತಿಯಾಗಿದೆ. ಮುಖ್ಯಾಧಿಕಾರಿಗೂ ಶೈಲನಲ್ಲಿ ಭರವಸೆಯಿದೆ, ಹೀಗಿರುವಾಗ ನನ್ನನ್ನು ಇವನು ಇರಗೊಡಲಾರ!

ಎಂಬ ಸಂದೇಹ ಸೋಮಯ್ಯನನ್ನು ಕೂಡಿದವು. ಅವನ ಸಂಕುಚಿತ ಬುದ್ಧಿ ಅಲ್ಲಿಗೇ ನಿಲ್ಲಲಿಲ್ಲ. ಕ್ರಮೇಣ ಕರ್ತವ್ಯ ಮರೆತ, ದ್ವೇಷಾಸೂಯೆ ಆಡಲಾರಂಭ ವಾಯಿತು. ತನ್ನ ಪ್ರಾಬಲ್ಯವನ್ನು, ಪ್ರಚಲಿತ ವ್ಯಕ್ತಿಯಾದ ಶೈಲನ ಮೇಲೆ ಪ್ರಯೋಗಿಸಲು ಸಮಯ ನೋಡುತ್ತಿದ್ದ.

ಶೈಲನಿಗೆ ಉದ್ಯೋಗ ಕಲ್ಪಿಸಿಕೊಟ್ಟ ಅಧಿಕಾರಿ, ಪರಿಶೀಲಿಸಲು ಸಾಧಕ್ಕೆ ಬಂದ. ರಮ್ಯವಾಗಿ ಕಾಣುತ್ತಿದ್ದ ಭವನವನ್ನು ನೋಡಿ, ತೋಟಗಾರನ ಚತು ರತೆಗೆ ಮೆಚ್ಚಿದ. ಈ ಕಾರಣದಿಂದ ಸೋಮಯ್ಯನಲ್ಲಿ ಬೆಳೆಯುತ್ತಿದ್ದ ಅಸೂಯೆ ಮತ್ತಷ್ಟು ಪ್ರಬಲಿಸಿತು.

ಸೋಮಯ್ಯನಿಗೊಬ್ಬ ಚಿಕ್ಕಮಗನಿದ್ದ. ಅವನ ಹೆಸರು ರುದ್ರ. ತಂದೆ ಯೊಂದಿಗೆ ರುದ್ರ, ತೋಟದಲ್ಲಿ ಸಣ್ಣ ಸಣ್ಣ ಕೆಲಸ ಮಾಡುತ್ತಿದ್ದ. ಶೈಲನಿಗೆ ಯಾರ ನೆರವು ಇಲ್ಲದಿದ್ದಾಗ, ರುದ್ರನ ಸಹಾಯ ದೊರೆಯಿತು. ಹೊಸದಾಗಿ ಶೈಲ ನಿರ್ಮಿಸಿಕೊಂಡಿದ್ದ ಪ್ರಯೋಗಶಾಲೆಯಲ್ಲಿ ಅವನು ಓಡಾಡುತ್ತಿದ್ದ.

ಪರಿಶೀಲನೆಗೆಂದು ಬಂದ ಅಧಿಕಾರಿ, ಹೂದೋಟ ಭರ್ತಿಯಾಗಿದ್ದುದನ್ನು ಕಂಡು, ಬೆಳೆವ ತರ್ಕಾರಿಯೆಲ್ಲಾ ವಿಕ್ರಯಿಸುತ್ತಿದ್ದಾರೆಂದು, ಸುಲಭವಾಗಿ ಊಹಿಸಿಕೊಂಡ. ಅವನು ಶೈಲನನ್ನು ಪ್ರಶ್ನಿಸಿದಾಗ, 'ಸೋಮಯ್ಯನೇ ಆ ವಿಚಾರಕ್ಕೆ, ಉತ್ತರ ಹೇಳಬೇಕು' ಎಂದ ಶೈಲ.

ಪ್ರಯೋಗಶಾಲೆಯನ್ನು ಪರೀಕ್ಷಿಸಿ, ಜೇನುತುಪ್ಪದ ಸೀಸೆಯೊಂದಿಗೆ ಅಧಿ ಕಾರಿ, 'ಗ್ಲೀವ್ಯೂ' ಬಿಟ್ಟ. ತೃಪ್ತಿಪಟ್ಟು ಹೊರಟು ಹೋದುದನ್ನು ನೋಡಿದ ಸೋಮಯ್ಯ, ಸಹಿಸಲಾರದೆ ಶೈಲನಿಗೆ ಪ್ರತಿಹಿಂಸೆ ಮಾಡುವ ಸಾಹಸ ಮಾಡಿದ. ಶೈಲನನ್ನು ಮೆಚ್ಚಿ, ಜೇನುತುಪ್ಪದ ಸಂಗ್ರಹದೊಂದಿಗೆ ಅಧಿಕಾರಿ ಹೊರಟುದುದು ಸೋಮಯ್ಯನಿಗೆ ಪ್ರಮಾದವಾಗಿ ಕಂಡುಬಂತು.

ಅಕಾರಣವಾಗಿ ವೈಷಮ್ಯ ಬೆಳೆಸಿಕೊಂಡ ಸೋಮಯ್ಯನಿಗೆ ಮಿಕ್ಕ ಆಳು ಗಳ ಸಹಾಯ ದೊರೆಯುವ ಹಾಗಿರಲಿಲ್ಲ ಹಿಂಸೆ, ಖೂನಿ, ರಕ್ತಪ್ರವಾಹ ನಡಿಸಲು ಅವನಿಗೆ ಧೈರ್ಯವಿರಲಿಲ್ಲ. ದ್ವೇಷ ಮಾತ್ರ ಬೆಳಸಿ, ಸಮಯ ಕಾಯುತ್ತಿದ್ದ. ಸೋಮಯ್ಯ ಒಡ್ಡುವ ಪ್ರಲೋಭನಕ್ಕೆ, ಯಾವ ಎಚ್ಚೆತ್ತ ಮನುಷ್ಯ ಸಿಲುಕುವನು? ಶೈಲ ದೂರವಾಗಿದ್ದ.

ಅವಕಾಶ ದೊರೆಯದೆ, ಕೀಳ್ತರದ ಕೆಲಸಕ್ಕೆ ಸೋಮಯ್ಯ ಮನಸ್ಸು ಮಾಡಿದ. ಶೈಲನ ಪ್ರಯೋಗಶಾಲೆಯಲ್ಲಿದ್ದ ಉಪಕರಣಗಳನ್ನು ಕಳವು ಮಾಡುವುದು, ಜೇನುಗೂಡಿನ ಬೆಳವಣಿಗೆಗೆ ಅಡ್ಡಿಮಾಡುವುದೇ ಮೊದಲಾದ ಹಿಂಸೆ ಜರುಗಿತು. ಸೋಮಯ್ಯನ ಕೃತ್ರಿಮವನ್ನು ಕಂಡು ಶೈಲ, 'ಸ್ವಕೀಯವೇ ಆದ ನನ್ನ ಪ್ರಯೋಗಶಾಲೆಯಲ್ಲಿ ನಿನಗೇನೂ ಕೆಲಸವಿಲ್ಲ' ಎಂದು ಸೋಮಯ್ಯನನ್ನು ಅಡ್ಡಿಪಡಿಸಿದ.

ಸೋಮಯ್ಯನ ಕೃತ್ರಿಮಾಲೋಚನೆ ಕೆಲವುಕಾಲ ನಿಂತುಹೋದವು. ಸೌಧದಿಂದ ಜೇನುತುಪ್ಪ ಸಂಗ್ರಹವನ್ನು ತೆಗೆದುಕೊಂಡು ಹೋದ ಅಧಿಕಾರಿ, 'ಗ್ಲೀವ್ಯೂ' ಅರಸರಿಗೆ ತಲ್ಪಿಸಿದ. ಮಧು ಶೇಖರಣೆ ನಡೆಯುತ್ತಿರಲೆಂದು ಅವರು ಪ್ರತಿಯಾಗಿ ಹೇಳಿ ಕಳುಹಿಸಿದರು. ಭವನಕ್ಕೆ ಸುದ್ದಿ ಮುಟ್ಟಿದಂದಿನಿಂದ ಶೈಲ, ವಿಶೇಷ ಎಚ್ಚರಿಕೆಯಿಂದ ಜೇನುಗೂಡನ್ನು ನೋಡಿಕೊಳ್ಳುತ್ತಿದ್ದ.

ಜೇನುಗೂಡನ್ನು ಹಾಳುಮಾಡುವನೆಂಬ ಭಯದಿಂದ ಶೈಲ ಎಚ್ಚರಿಕೆಯಿಂದಿದ್ದಾಗ, ಹಠಾತ್ತನೆ; ನಿರ್ಭಯವಾಗಿ ಬಂದುಹೋಗುತ್ತಿದ್ದ ರುದ್ರ, ನಿಂತುಹೋದ. ಗೂಡು ಹಾಳಾದರೆ ಮಾಡಿದುದೆಲ್ಲ ವ್ಯರ್ಥವಾಗುವುದು, ನಾನು ಅರಸರ ಕೋಪಕ್ಕೆ ಪಾತ್ರನಾಗುತ್ತೇನೆ; ಸೋಮಯ್ಯ ಏನೇನೋ ನಡಿಸುತ್ತಿದ್ದಾನೆ, ಏನು ಮಾಡುವುದೆಂದು? ಶೈಲನಿಗೆ ಹೊಳೆಯದೇ ಹೋಯಿತು. ಈ ಉಚ್ಛೃಂಖಲ ವೃತ್ತಿ ತಡೆಯಿಲ್ಲದೇ ನಡೆಯುತ್ತಿದೆ, ನನಗೆ ಸಹಾಯವೇ ಇಲ್ಲ ಎಂದು ದಿಕ್ಕು ಕಾಣದಾದ ಶೈಲ.

ಒಂದು ಸಂಜೆ, ನೆರಳಲ್ಲಿ ಕುಳಿತ ಶೈಲ, ಸೋಮಯ್ಯನ ಚರ್ಯೆಯನ್ನು ಚಿಂತಿಸುತ್ತಿದ್ದ. ಬರ್ಮದಲ್ಲಿಯೂ ಈ ಬಗೆಯ ಕಷ್ಟಕ್ಕೆ ನಾನು ಬೀಳಲಿಲ್ಲ. ಈ ಕ್ಷುದ್ರಜೀವಿಯೊಬ್ಬನಿಗೆ ಹೆದರಬೇಕಾಗಿರುವುದು. ನಾನು ಇಲ್ಲಿ ನಿಲ್ಲುವ ಬಗೆ ಹೇಗೆ? ಎಂಬ ಯೋಚನೆ ಮಾಡಿದ.

ಸಂಜೆ ತೀರಿ ಕತ್ತಲಾಗುತ್ತ ಬಂತು. ಪ್ರಯೋಗಶಾಲೆಯನ್ನು ಭದ್ರವಾಗಿ ಮುಚ್ಚಿ ಬೀಗಹಾಕಿಕೊಂಡು ಬಂದವನು, ನೆಮ್ಮದಿಯಿಂದಲೇ ಕುಳಿತಿದ್ದ. ಕೈದೀಪವೊಂದು ಹಿಡಿದವ್ಯಕ್ತಿ, ಪ್ರಯೋಗಶಾಲೆಯ ಹತ್ತಿರ ಸುಳಿದಹಾಗೆ ಅವನಿಗೆ ಕಂಡುಬಂತು. ಏನೋ ಪ್ರಮಾದ ಸೋಮಯ್ಯ ಹವಣಿಸುತ್ತಿರುವ ಎಂದು ಶೈಲ ಧಾವಿಸಿದ. ಪ್ರಯೋಗಶಾಲೆಯಲ್ಲಿ ಮುಖ್ಯವಾಗಿ, ಹೇಮಂತರು

ಕೊಟ್ಟ ಗುಪ್ತನಿಧಿಯಿತ್ತು. ಅದು ಎಲ್ಲಿ ಕಳುವಾಗುವುದೋ ಎಂದು ಶೈಲ ಆತುರದಿಂದ ಓಡಿಬಂದ.

ಶೈಲನಿಗೆ ಸಹನೆ ಮೀರಿತು. ಆಗ ಸೋಮಯ್ಯ ಸುಲಭವಾಗಿ ಶೈಲನ ಕೈಗೆ ಸಿಕ್ಕಿಬಿದ್ದ. ಪ್ರಯೋಗಶಾಲೆಯ ಉಪಕರಣವೊಂದು ಅವನ ಕೈಯಲ್ಲಿತ್ತು. ಭದ್ರವಾಗಿ ಬೀಗ ಹಾಕಿದ್ದುದನ್ನು ಸೋಮಯ್ಯ ಮೋಸದಿಂದ ತೆಗೆದಿದ್ದ. ಸೋಮಯ್ಯನ ಕುತ್ತಿಗೆ ಹಿಡಿದು ಶೈಲ, ಕೆಲಸದ ಆಳುಗಳೆಲ್ಲಾ ಓಡಿಬರುವಂತೆ ಕೂಗಿಕೊಂಡ. ನನ್ನ ಮರ್ಯಾದೆ, ಆಳುಗಳ ಮುಂದೆ; ಬೆಲೆಯಿಲ್ಲದೆ ಹೋದರೆ, ಇಲ್ಲಿ ಬದುಕುವುದು ಅಸಾಧ್ಯ ಎಂದು ಸ್ಮೃತಿಗೆ ತಂದುಕೊಂಡ ಸೋಮಯ್ಯ. ಮನ್ನಿಸುವಂತೆ ಶೈಲನ ಕಾಲಿಗೆ ಬಿದ್ದು ಬೇಡಿಕೊಂಡ. 'ತಡೆದಷ್ಟು ಕೌರ್ಯ ಹೆಚ್ಚುತ್ತಿದೆ, ನಿನಗೊಬ್ಬ ಅರಸನ ಆಶ್ರಯ ಬಲವಾಗಿದೆಯೆಂದು ಅಧಿಕಾರ ನಡೆಸುತ್ತಿದೀಯೆ! ಹೀನಕೆಲಸಗಳನ್ನು ಮಾಡಿ ಹಿಂಸೆ ಕೊಡುತ್ತಿದೀಯೆ! ಅಧಿಕಾರ ನಿನಗೆ ದೊಡ್ಡದಿರಬಹುದು, ನಾಳೆಯೇ ವಿಚಾರ ತಿಳಿಸಿ ನೀನು ಇಲ್ಲಿ ನಿಲ್ಲದಂತೆ ಮಾಡುವೆ' ಎಂದು ಶೈಲ ಆರ್ಭಟಿಸಿದ.

ಶೈಲನ ಕೂಗನ್ನು ಕೇಳಿ ತೋಟದಾಳುಗಳು ಪ್ರಯೋಗಶಾಲೆಯ ಸುತ್ತ ಓಡಿಬಂದರು.

'ನನ್ನ ಸ್ಥಾನಮಾನಗಳು ಇಂದಿಗೆ ತೀರುವುದು. ಆಳುಗಳ ಮುಂದೆ ನಾನು ಬೆಲೆಯಿಲ್ಲದಂತಾಗುವೆನು. ರುದ್ರನ ಸಲುವಾಗಿಯಾದರೂ ನನ್ನನ್ನು ರಕ್ಷಿಸಿರಿ' ಎಂದು ಸೋಮಯ್ಯ ಬೇಡಿಕೊಂಡ. ಎಲ್ಲವೂ ದುರಾಶೆಯ ಫಲವೆಂದು ದುಃಖಪಟ್ಟ.

ರುದ್ರನ ಹೆಸರನ್ನು ಹೇಳಿ, ಕುತ್ತಿನಿಂದ ಪಾರಾಗಲು ಸೋಮಯ್ಯ ಯತ್ನಿಸಿದುದು ಸಾಧ್ಯವಾಯಿತು. ತೋಟದಾಳುಗಳು ಶೈಲನನ್ನು ಹುಡುಕಿ ಬಂದರು. ಸೋಮಯ್ಯ ಕಳೆಗುಂದಿ ನಿಂತಿರುದನ್ನು ಕಂಡವರು, ದ್ರೋಹಿ ಯಾರೆಂದು ಸುಲಭವಾಗಿ ತಿಳಿದರು. ಸರಿಯಾದ ನೀತಿಯನ್ನು ಸೋಮಯ್ಯ ಕಲಿತನೆಂದು ಅವರಿಗೆ ಸಂತೋಷವಾಯಿತು. ಸೋಮಯ್ಯ ನಿಧಾನವಾಗಿ ತಲೆತಗ್ಗಿಸಿ, ಕತ್ತಲಲ್ಲಿ ಮನೆಗೆ ಹೊರಟುಹೋದ.

ಬೆಳೆಯುತ್ತಿದ್ದ ದ್ವೇಷ ಕಡಿಮೆಯಾಯಿತು. ನಿರ್ವಿಘ್ನವಾಗಿ ಜೇನುಗೂಡು ಕಟ್ಟುತ್ತಿತ್ತು. ಶೈಲ-ಸೋಮಯ್ಯ, ಪರಸ್ಪರ ಮಾತನಾಡುವುದನ್ನು

ಬಿಟ್ಟರು. 'ಗ್ಲೇವ್ಯೂ' ಭವನದಲ್ಲಿ ತನ್ನ ಪಾಡಿಗೆ ತಾವು ಕೆಲಸ ನೋಡತೊಡಗಿದರು. ರುದ್ರ, ಎಂದಿನಂತೆ ಶೈಲನೊಂದಿಗೆ ಕೆಲಸಮಾಡುತ್ತ ಅವನ ನಂಬುಗೆಗೆ ಪಾತ್ರನಾದ. ಸೋಮಯ್ಯ, ರುದ್ರನನ್ನು ಮುಂದೆ ಅಡ್ಡಿಪಡಿಸಲಿಲ್ಲ. ಶೈಲನ ಭಯವೇ ಸೋಮಯ್ಯನಿಗೆ ಹೆಚ್ಚಾಗಿದ್ದುದರಿಂದ, ಅವನು ಪುನಃ ಯಾವ ಗೊಡವೆಗೂ ಹೋಗಲೆತ್ನಿಸಲಿಲ್ಲ.

೧೫

ನೀಳವಾದ ಸಿಲ್ವರ್‌ಓಕ್ ಗಿಡಗಳ ಮಧ್ಯೆ ಶೈಲನ ಆಡಳಿತಕ್ಕೆ ಒಳಪಟ್ಟ ಹೂತೋಟವಿತ್ತು. ಆ ಸಮೃದ್ಧಿ ನೆಲೆಯಲ್ಲಿ ಬೆಳಗಿನಿಂದ ಬೈಗಿನವರೆಗೂ ಅವನು ಸುತ್ತಾಡಿ ಬರುತ್ತಿದ್ದ. ಅಕಾರಣವಾಗಿ ಸೋಮಯ್ಯ, ದ್ವೇಷವನ್ನು ಮುಂದುವರಿಸಲು ಸಾಹಸಪಡಲಿಲ್ಲ. ಅವನ ಕೂಡಿಡುವ ಕೆಲಸ ಅಡ್ಡಿಯಿಲ್ಲದೆ ಸಾಗುತಿತ್ತು. ಶೈಲನ ಹೂದೋಟದ ಸಮೀಪದಲ್ಲಿಯೇ ಪ್ರಯೋಗಶಾಲೆಯಿತ್ತು. ಅವನ ಕೆಲವು ವಸ್ತುಗಳು ಅಲ್ಲಿಯೇ ಇದ್ದುವು. ಮುಖ್ಯವಾಗಿ, ಜೇನುಗೂಡು ವೃದ್ಧಿಯಾಗುತ್ತಿತ್ತು. ಪ್ರಯೋಗಶಾಲೆಯನ್ನೇ ಹೊಂದಿಕೊಂಡ ವಿರಾಮಸ್ಥಾನದಲ್ಲಿ ಒಂದು ಮೇಜು, ಕುರ್ಚಿ, ನಾಲ್ಕಾರು ಪುಸ್ತಕಗಳಿದ್ದುವು. ಭೂಪಟವೊಂದು ಮಾತ್ರ ಇಡೀ ಗೋಡೆಯನ್ನು ಚಿತ್ರಪಟಗಳ ಪರವಾಗಿ ಸ್ಥಳವನ್ನು ಆಕ್ರಮಿಸಿಕೊಂಡಿತ್ತು.

ಶತ್ರುಗಳ ಧಾಳಿನಡೆದು, ಪಟ್ಟಣ ಕೈವಶವಾಯಿತೆಂದು ಶೈಲ ಪತ್ರಿಕೆಯಲ್ಲಿ ನೋಡಿ ತಿಳಿಯುತ್ತಿದ್ದ. ರಾತ್ರಿವೇಳೆಯಲ್ಲಿ ಭೂಪಟ ಹರಡಿ ನೋಡಿಕೊಳ್ಳುತ್ತಿದ್ದ. ಇರುಳಲ್ಲಿ ಬಹಳ ಹೊತ್ತಿನವರೆಗೂ ದೀಪ ಉರಿಯುತ್ತಲೇ ಇತ್ತು. ಹೇಮಂತರಿಂದ ದೊರೆತ ಲೋಕಗೀತೆಗಳ ಸಂಗ್ರಹವು ಶೈಲನ ಮೇಜಿನ ಮೇಲೆ ಸಾಮಾನ್ಯವಾಗಿ ಇರುತಿತ್ತು. ಇರುಳಲ್ಲಿ ಪತ್ರಿಕಾ ವ್ಯಾಸಂಗದಲ್ಲಿ ಮುಳುಗುತ್ತಿದ್ದ ವನಮಾಲಿ, ಮುಂಜಾನೆ ಎಲ್ಲರಿಗಿಂತಲೂ ಮುಂದಾಗಿಯೇ ಮಂಜಿನಿಂದ ಕೂಡಿದ ಒತ್ತು ತೋಟದಲ್ಲಿ ಸುತ್ತಾಡುತ್ತಿದ್ದ.

ಜನರು ತೃಪ್ತರಾಗಿ, ಸಹಜವಾಗಿ, ಜೀವಿಸುವ ಬದಲು ಎಷ್ಟು ? ಕೃತ್ರಿಮವಾದ ಜೀವನ ನಡಿಸುತ್ತಾರೆಂದು ಶೈಲ ನೆನೆದ. ಈ ತಂಪುನೆಲೆಯಲ್ಲಿ ವಾಸಮಾಡಲು ಅನೇಕರು ಬರುತ್ತಾರೆ, ಸೊಬಗಿನಲ್ಲಿಯೇ ಕಾಲ ಕಳೆಯುವವರು ;

ಅಸ್ಪಷ್ಟಕ್ಕೇತೃಪ್ತರಾಗುವುದಿಲ್ಲ, ಅವರ ಅತ್ಯುನ್ನತಸ್ಥಿತಿಯೇ ಅಧಃಪತಾಳಕ್ಕೆ ಒಯ್ಯುವುದು. ಮೋಹಕ್ಕೆ ಸೌಧವಿದೆ, ಪಂದ್ಯಾಟಕ್ಕೆ ಈ ಠಾವಿನಲ್ಲಿ ಅವಕಾಶವಿದೆ. ಪರಾಧೀನ ಪ್ರಜೆಗಳನ್ನು ಅಲಕ್ಷ್ಯಿಸಿ, ಎಷ್ಟೊ ಮಂದಿ ಅರಸರು ಇಲ್ಲಿ ಕಾಲ ತಳ್ಳುತ್ತಾರೆ. ಈ ಡಾಂಭಿಕರಿಗೂ ಪ್ರತಿಷ್ಠಿತರಾದ ಚೌಧುರಿಯವರಿಗೂ ಏನೂ ವ್ಯತ್ಯಾಸ ಕಾಣದೆಂದು ಶೈಲ ತುಲನೆ ಮಾಡಿಕೊಂಡ.

'ಗ್ಲೇವ್ಯೂ' ಬಿಟ್ಟು ಅವನೆಲ್ಲಿಗೂ ಹೊರಟಿರಲಿಲ್ಲ. ನೀಲಗಿರಿಯ ವಾಸಿಗಳು ಕಾಡಿನಿಂದ ಆಯ್ದು ತಂದ ವಸ್ತುಗಳನ್ನು ವಿಕ್ರಯಿಸುವುದಕ್ಕಾಗಿ ಸಂತೆಗೆ ಬರುತ್ತಿದ್ದರು. ಒಮ್ಮೆ ಶೈಲನಿಗೆ ಸಂತೆಗೆ ಹೋಗುವ ಮನಸ್ಸಾಯಿತು. ಸುತ್ತಾಡಿ ಬರಲು ಅವನು ಹೊರಟ. ಕೊಳ್ಳುವವಸ್ತು ಅವನಿಗೇನೂ ಅಲ್ಲಿ ಕಾಣಲಿಲ್ಲ. ನಿವಾಸಿಗಳು ತಂದ ಕೊಂಬು, ದಂತ, ಮೂಲಿಕೆಗಳು ಶೈಲನಿಗೇಕೆ ಬೇಕು? ಆದರೆ, ಅವನ ಕಣ್ಣಿಗೆ, ನಕ್ಷತ್ರಾಕೃತಿಯ ಆಸ್ಟರ್, ಕೆಂಪುಛಾಯೆಯ ಡೇಯ್ಸ್, ಮ್ಯಾರಿಗೋಲ್ಡ್, ಪಿಟ್ಯೂನಿಯಾ ಮೊದಲಾದವು ಬಿದ್ದವು. ಹೂಗಳ ಸಿರಿಯನ್ನು ಹೆಚ್ಚಿಸಿ, ಹಿರಿಮೆ ಸಂಪಾದಿಸಬೇಕೆಂದಿದ್ದವನಿಗೆ ಇವುಗಳು ಸೊಗಸಾಗಿ ಕಂಡವು.

ನೀಲಗಿರಿಯ ವೆಲ್ಲಿಂಗ್‌ಟನ್ ನಿಲ್ದಾಣದ ಸಮೀಪದಲ್ಲಿ ಯುದ್ಧಾಚರಣೆಯ ಕೇಂದ್ರವಿತ್ತು. ಬೆಳೆದ ಹೂ ಹಣ್ಣುಗಳು ಸೈನಿಕರ ಮೋಜಿಗೆ ಸೇರಿಹೋಗುತ್ತಿದ್ದವು. ತೋಟಗಾರರು ಹೇರಳವಾಗಿ ಬೆಳೆದುದನ್ನು ಸೈನ್ಯಕ್ಕೆ ಸರಬರಾಯಿ ಮಾಡಿ, ಆದಾಯ ಹೆಚ್ಚಿಸಿಕೊಳ್ಳುತ್ತಿದ್ದರು. 'ನಾವು ಬೆಳೆದುದನ್ನು ಕೊಳ್ಳುವವರಿರುವಾಗ, ಚತುರನಾದ ಶೈಲ ಹೂವಿನಆಶೆಗೆ ಬಲಿಬಿದ್ದು; ಪ್ರಯೋಗಶಾಲೆಯಲ್ಲಿ ಕಾಲ ಕಳೆಯುತ್ತಿದ್ದಾನೆ!' ಎಂದು ಮಾತನಾಡಿಕೊಂಡ ಇತರ ತೋಟಗಾರರು, ಶೈಲನಿಗೆ ಬುದ್ಧಿವಾದ ಹೇಳಲು ಮುಂದೆ ಬಂದರು. ಹಾಗೆ ಬಂದವರು ನಿಷ್ಫಲರಾಗಿ ಹಿಂದಿರುಗಬೇಕಾಯಿತು.

'ಬೆಳೆದುದನ್ನೆಲ್ಲಾ ವಿಕ್ರಯಿಸುವ ಗೋಜು ನನಗೆ ಬೇಡ! ಬೆಳೆಸಿ ತಣಿಯುವುದು ಮಾತ್ರ ನನ್ನದು, ನಿಮ್ಮ ಬುದ್ಧಿವಾದ ನನಗೆ ಹಿಡಿಸದು' ಎಂದು ಶೈಲ ಎಲ್ಲರನ್ನೂ ಕಳುಹಿಬಿಟ್ಟ.

ಹಿಂತಿರುಗಿ ಕಳುಹಿಸಿಬಿಟ್ಟವನು, ತನ್ನಲ್ಲಿಯೇ ವಿಮರ್ಶೆ ಮಾಡಿಕೊಂಡ. ಆಳುಗಳು ಆಳುಗಳೇ! ಕೂಲಿಯಾಳುಗಳಿಗೆ ಉದ್ಯೋಗ ದೊರಕಿಸಿಕೊಡುವುದೇ

ದೊಡ್ಡ ಉಪಕಾರವೆಂದು ಜನರು ತಿಳಿದಿರುತ್ತಾರೆ! ಅನುಕೂಲ್ಯವಾದ ತಮ್ಮ ಬಂಡವಾಳವನ್ನು ಉಪಯೋಗಿಸಿ, ಆಳುಗಳಿಂದ ಆದಾಯ ಹೆಚ್ಚಿಸಿಕೊಳ್ಳುತ್ತಿದ್ದಾರೆ. ಅಲ್ಪವೇತನ ಪಡೆಯುವ ಕೂಲಿಯಾಳುಗಳಿಗೆ ಯಾವ ಹೆಚ್ಚಿನ ರೀತಿ ಸಹಾಯವಾಗುತ್ತಿದೆ? ತಿಳಿವಳಿಕೆಯಿಲ್ಲದ ಜನರು ಗಾಳಿ, ಮಳೆ, ಚಳಿಯೆನ್ನದೆ ಬಂಡವಾಳಗಾರರಿಗಾಗಿ ದುಡಿಯುತ್ತಾರೆ. ನನ್ನ ಸ್ಥಾನವೇನು ಹೆಚ್ಚಿನದಲ್ಲ! ನಾನೂ ಒಬ್ಬ ಕೂಲಿಯಾಳೇ. 'ಗ್ಲೇವ್ಸ್' ನನಗೆ ಶಾಶ್ವತವಲ್ಲ. ಇಲ್ಲಿ ನಾನು ಹಂಗಾಮಿ ಉದ್ಯೋಗದಲ್ಲಿದ್ದೇನೆ. ಕೂಲಿಯಾಳಾದವನಿಗೆ ಒಂದು ಸ್ಥಳವಿಲ್ಲ, ನೆಲೆಯಿಲ್ಲ, ಅವನು ಬೇಟೆಗೆ ಸಿಕ್ಕಿದ ಪ್ರಾಣಿಯಂತೆ ಹಾಹಾಕಾರ ಪಡುತ್ತಿರಬೇಕು, ಜೀವನಕ್ಕಾಗಿ ತೂರಾಡುತ್ತಿರಬೇಕು, ಅವನ ಸಮಸ್ಯೆ-ಲೋಕದ ಮಹಾ ಸಮಸ್ಯೆಗಳಲ್ಲಿ ಸೇರಿಹೋಗಿದೆಯೆಂದು ನೆನೆದ.

'ಗ್ಲೇವ್ಸ್' ಹಿಂದಿನ ವಿಶಾಲ ಮೈದಾನದಲ್ಲಿ ಒಮ್ಮೆ ಕುಳಿತು ನೋಡುತ್ತಿದ್ದ. ಸಮೀಪದಲ್ಲಿಯೇ ಸೌಧಕ್ಕೆ ಸೇರಿದ ದೇವಾಲಯದ ಕಿರುಘಂಟೆ, ಒಂದೊಂದು ಸಾರಿ ಬಡಿದು ಅವನನ್ನು ಧ್ಯಾನದಿಂದ ಎಚ್ಚರಿಸಿತು. ಹೆಚ್ಚು ಜನ ಓಡಾಡದ ಹಾದಿಯಲ್ಲಿ, ಹಲವಾರು ಮೋಟಾರುಗಳು ಅಕಸ್ಮಿಕವಾಗಿ ಕಂಡವು. ಧೂಳೆಬ್ಬಿಸಿ ಹೋಗುತ್ತಿದ್ದ ವಾಹನಗಳನ್ನು ಕುತೂಹಲದಿಂದ ನೋಡುತ್ತಿದ್ದ ಶೈಲ ಹತ್ತಿರಕ್ಕೆ ಬಂದ.

ಆ ವಾಹನಗಳೆಲ್ಲಾ ಸೈನ್ಯಶಾಖೆಗೆ ಸೇರಿದ್ದವು. ಯುದ್ಧಾಸಕ್ತಿ, ಯುದ್ಧಾಚರಣೆ, ಪಿಡುಗು ಪರಿಭ್ರಮಣೆ ಶೈಲನನ್ನು ಮತ್ತಷ್ಟು ಕೆರಳಿಸಿತು. ಈಗ ನಡೆಯುತ್ತಿರುವ ಯುದ್ಧ-ತೀರದ ಯುದ್ಧವಾಗಿ ಕಾಣಬರುತ್ತಿದೆ. ಜನಜೀವನಕ್ಕೆ ಅತ್ಯಗತ್ಯವಾದ ಸಾಮಗ್ರಿಗಳು ಸೈನ್ಯಕ್ಕೆ ಸೇರಿಹೋಗುತ್ತಿದೆ. ಭೂತದಂತಹ ವಾಹನಗಳು ಎಲ್ಲವನ್ನೂ ಹೊತ್ತು ವೆಲ್ಲಿಂಗ್ಟನ್ ಮಾರ್ಗ ಹಿಡಿಯುತ್ತಿರುವುದನ್ನು ನಾನು ಎಷ್ಟೋಸಾರಿ ನೋಡಿದೇನೆ. ಮಾರುವ ದೃಷ್ಟಿಯನ್ನೇ ಮುಖ್ಯವಾಗಿಟ್ಟುಕೊಂಡು, ಜನರು ಮತ್ತೇನನ್ನೂ ಕಾಣುತ್ತಿಲ್ಲ. ಎಲ್ಲವೂ ಯುದ್ಧಾಚರಣೆಯದೊಂದುಳಿಯಲ್ಲಿ ಮುಗಿದುಹೋಗುವುದಾದರೆ, ನಮ್ಮನ್ನು ಲಕ್ಷಿಸುವವರಾರು? ಎಂದುಕೊಂಡ.

ಯಾವ ಪ್ರಾಂತ್ಯ, ಯಾವದೇಶದ ಜನರು ಇವರು? ಎಂದು ನೋಡುತ್ತಿದ್ದ ಶೈಲ, ತಾನೆಯೇ ಅಂದುಕೊಂಡ. ಆಗ ಅನೇಕ ತರುಣ

ಸೈನಿಕರು ಕೋಲಾಹಲ ಮಾಡುತ್ತಾ ವಾಹನದಲ್ಲಿ ಮೆರೆದು ಮರೆಯಾಗುತ್ತಿದ್ದರು. ಈ ಜನರನ್ನು ಜ್ಞಾನಿಗಳಲ್ಲಿ-ಅಜ್ಞಾನಿಗಳೆಂದು ಕರೆಯಬೇಕು. ಮೊದಲು ಎಲ್ಲಾ ತರುಣರ ಮನಸ್ಸು ಸೈನಿಕ ಶಿಕ್ಷಣಕ್ಕಾಗಿ ಆಶೆಪಡುತಿತ್ತೇ? ನಿರುದ್ಯೋಗಿಗಳು ಪ್ರಲೋಭನೆಗೆ ಸಿಕ್ಕಿದಂತೆ, ಸ್ವಾತಂತ್ರ್ಯಧ್ಯೇಯವನ್ನು ಮರೆತ ತರುಣರನೇಕರು, ಸೈನ್ಯಕ್ಕೆ ಸೇರಿಹೋಗಿದ್ದಾರೆ. ಯುದ್ಧ ಮುಗಿದನಂತರ ಏನೂ ತಿಳಿಯದ ಈ ಸಾಹಸಿಗಳು ಮೂಕಧ್ಯಾನದಲ್ಲಿ ಮುಳುಗುತ್ತಾರೆ, ಎಂಬ ತೀಕ್ಷ್ಣ ಅಭಿಪ್ರಾಯಕ್ಕೆ ಆ ದೃಶ್ಯ ಆಸ್ಪದ ಕೊಟ್ಟಿತು.

ಕಲಿತವರ ಬಾಳ್ವೆ ಉತ್ತಮ ಸ್ಥಿತಿಯಲ್ಲಿಲ್ಲ! ಅವರು ನಿಂತ ಮಟ್ಟವೂ ಉತ್ತಮವಾಗಿಲ್ಲ! ಆಯುಧ ಹಿಡಿದು ಹೋರಾಟಕ್ಕೆ ಓಡುತ್ತಿರುವಾಗ್ಗೆ, ಮಿಕ್ಕವರ ಪಾಡೇಕೆ ಅವರಿಗೆ? ನಾನು ಮೊದಲಾಗಿ ಕೃಷಿಕ, ಆಳೇ, ಆಳಾಗಿ ಬಾಳಿದರೂ ವಿದ್ಯಾರ್ಜನೆಗೆ, ಜ್ಞಾನಾರ್ಜನೆಗೆ ಅವಕಾಶವಿರಬೇಕು! ಜ್ಞಾನದ ಬೆಳಕು ಕಾಣುವವನು ಆಯುಧ ಹಿಡಿಯಲಾರ. ಜ್ಞಾನದ ಬೆಳಕು ನನಗೆ ಕಾಣುವುದೆಂದು? ಎಂದು ಹಂಬಲಿಸಿದ ಶೈಲ.

ರುದ್ರ, ಶೈಲನ ಅಚ್ಚುಮೆಚ್ಚಿನ ಶಿಷ್ಯನಾದ. ತೋಟದಲ್ಲಿ ನೀರೆರೆಯುವಿಕೆಯಿಂದ ಮೊದಲಾಗಿ ಎಲ್ಲವೂ ಅವನಿಂದ ನಡೆಯುತಿತ್ತು. ಬೇಸಿಗೆಯು ಆರಂಭವಾಗಿ ಅದರೊಡನೆ ಯುದ್ಧ ಭೀತಿಯೂ ಏರಿತು. ಯುದ್ಧಾತುರದಲ್ಲಿದ್ದ 'ಗ್ಲೇವ್ಯೂ' ಅರಸರು ಸೌಧಕ್ಕೆ ಬಾರಲಿಲ್ಲ. ಬದಲಾಗಿ, ಅರಸರ ಆಪ್ತರೊಬ್ಬರು ಬಂದರು.

'ಅರಸರು, ಬರುವರು, ನೀನು ಎಚ್ಚರದಿಂದಿರು!' ಎಂಬ ಅಧಿಕಾರಿಯ ಮಾತು ನನಗೆ ಬೆದರಿಕೆಯ ಮಾತಾಗಿ ಕಾಣಬರುತ್ತಿದೆ, ಎಂಬ ಸೂಚನೆ ಕಂಡುಕೊಂಡ ಶೈಲ.

೧೬

ಅರಸರ ಪರಾಜ್ಮುಖತೆಯನ್ನು ತಿಳಿದ ಶೈಲ, ದೂರವಾಗಿಯೇ ನಿಂತ. ಯುದ್ಧ, ಪರಾಕ್ರಮ, ಶತ್ರುಧಾಳಿಯೆಂಬ ಗಡಿಬಿಡಿಯಿಂದ ದೂರವಾಗಿದ್ದ ಅರಸರಂತೆ, ಸಿಡುಗು, ಪ್ರಲೋಭನೆ, ವೈಷಮ್ಯಗೊಡವೆಯಿಂದ ನನಗೇನು? ಎಂದು ಶೈಲ, ಪ್ರಯೋಗಶಾಲೆ ಸೇರಿಬಿಟ್ಟ. ಆಗ ಅರಸರ ಆಪ್ತವರ್ಗದವರು 'ಗ್ಲೇವ್ಯೂ' ಭವನ ಹೊಕ್ಕರು.

ಬಹಳ ದಿನದವರೆಗೂ ಖಾಲಿಯಾಗಿದ್ದ ನಿವೇಶನ ಈಗ ಭರ್ತಿಯಾದಂತಿದೆ. ಅರಸರು ಬಂದಿರಬಹುದು. ಸೋಮಯ್ಯ ಟೊಂಕ ಕಟ್ಟಿ ಸೇವೆಗೆ ನಿಂತಿದ್ದಾನೆ, ಎಂದು ತಿಳಿದ ಶೈಲ. ಆಳಾದವನಿಗೆ ಅರಸರ ಚಿಂತೆಯೇನು ? ರಾಜ್ಯ, ಕೋಶ, ಮೋದದಿಂದ ನನಗೇನಾಗಬೇಕು ? ಅವರ ಸಮ್ಮುಖದಲ್ಲಿ ನನಗೆ ಕೆಲಸವಿರದು. ದೂರವಾಗಿರುವುದೇ ಉತ್ತಮವೆಂದು ನಿರ್ಧರಿಸಿ ಪ್ರಯೋಗಶಾಲೆಯನ್ನು ಬಲವಾಗಿ ಹಿಡಿದುನಿಂತ. ಸೌಧದಲ್ಲಿ ಬಂದಿಳಿದಿರುವವರು ಅರಸರಲ್ಲ, ಅವರ ಅನುಯಾಯಿಗಳೆಂದು ಅವನಿಗೆ ತಿಳಿಯಲಿಲ್ಲ. ಬಹುದೂರದಲ್ಲಿದ್ದುದರಿಂದ ಸ್ವತಃ ತಿಳಿಯುವಹಾಗೂ ಇರಲಿಲ್ಲ.

ಸೋಮಯ್ಯನ ನಿತ್ಯದ ಕೆಲಸ ದೂರವಾಯಿತು. ಅನುಯಾಯಿ, ಅರಸರ ಸೇವೆಯಲ್ಲಿ ಭಾಗಿಯಾದವನು ತೋಟದ ಕೆಲಸ ನೋಡಿಕೊಳ್ಳಲಾಗಲಿಲ್ಲ. 'ಗ್ಲೇವ್ಯೂ' ಚಟುವಟಿಕೆಯನ್ನರಿತ ಶೈಲ, ರೇಡಿಯೋಗಾನದ ತೆರೆಯನ್ನು ಆಲೈಸಿದ. ನನಗೊಂದು ಪ್ರೋತ್ಸಾಹದ ಮಾತು, ಅವರಿಂದ ಬರಲಿಲ್ಲ. ಒಮ್ಮೆ ಮಧುವನ್ನು ಬಯಸಿ, ಶೇಖರಣೆ ಮಾಡುತ್ತಿರಬೇಕೆಂದು ಹೇಳಿಕಳುಹಿಸಿದರು. ನನಗೆ ಯಾವ ಬಗೆಯ ಕರೆಯೂ ಅರಸರಿಂದ ಬರಲಿಲ್ಲ ! ಇದಕ್ಕೆ ಮರುಗಬೇಕಾದ ಅವಶ್ಯಕತೆಯೇನೂ ಕಾಣದು. ಡಾಂಭಿಕ ಅರಸರಿಗೆ, ಒಮ್ಮೆ ಬೇಕಾಗುವ ವಸ್ತು ; ಮತ್ತೊಮ್ಮೆ ಬೇಡವಾಗುವುದು ಸಹಜ. ಹೆಚ್ಚೇಕೆ ? ಅಳರಸರಿಗೆ ಇಡೀ ಭೂಮಿಯ ವಸ್ತುಗಳು, ಭೋಗ ಸಾಮುಗ್ರಿಗಳು, ಸಹಾಯ ಸಂಪತ್ತುಗಳೇ ಆಗಿರುವಾಗ ಪ್ರಯೋಗಶಾಲೆ, ಮಧುಸಂಚಯನ ಹೆಚ್ಚಿನದೇನು ? ಒಬ್ಬನನ್ನು ಮೆಚ್ಚಿಸಲು ಹೋಗುವದರ ಬದಲು, ಬಾಳಿನ ಏಳಿಗೆಯ ವಿಚಾರ ಮುಂದುವರಿಸುವುದು ಯೋಗ್ಯವಾಗಿ ಕಾಣಬರುತ್ತಿದೆ, ನನ್ನ ಕರ್ತವ್ಯವೂ ಅಜ್ಞಾತದಲ್ಲಿ ನಡೆದು ಸಾಗಲಿ ಎಂದು ಬಯಸುತ್ತಿದ್ದೇನೆ ಎಂದು ತೀರ್ಮಾನಕ್ಕೆ ಬಂದ.

ಶೈಲನ ಮನಸ್ಥೈರ್ಯ, ರುದ್ರನಿಗೆ ವಿಚಿತ್ರವಾಗಿ ಕಂಡುಬಂತು. ಆದರೆ, ವಿಸ್ಮಯ ವಿಚಾರವನ್ನು ಕೇಳಿ ತಿಳಿಯುವ ಧೈರ್ಯ ಅವನಿಗಿರಲಿಲ್ಲ. ಭೀತನಾಗಿ ಅಡಗಿ ಕೂಡುವಂತೆ ಸೇರಿಹೋದ ಶೈಲ. 'ಹೊರಗಿನ ಕೆಲಸವನ್ನು ಲಕ್ಷ್ಯದಲ್ಲಿಟ್ಟು ಮಾಡುತ್ತಿರು' ಎಂಬುದಾಗಿ ರುದ್ರನಿಗೆ ಕೆಲಸವಹಿಸಿದ. ರುದ್ರ, ಶೈಲನ

ಅಭಿಪ್ರಾಯ ತಿಳಿದು ಅನುಸರಿಸಿದ. ಶೋಧನೆಯ ತತ್ವದಲ್ಲಿ ಪೂರ್ಣವಾಗಿ ಮುಳುಗಿಹೋದ ಶೈಲನನ್ನು ಕಂಡು ಸೋಮಯ್ಯ, 'ಅವನು ನಿರಾಶೆಯ ಮಡಲಲ್ಲಿದಾನೆ !' ಎಂದು ಹೇಳಿಕೊಂಡು ತೃಪ್ತನಾದ.

ರುದ್ರ, ಶೈಲನ ಅಪ್ಪಣೆಯಿಲ್ಲದೆಯೇ ಶೇಖರಿಸಿದ ಮಧುವನ್ನು ಸೌಧಕ್ಕೆ ಮುಟ್ಟಿಸಿದ. ಮಧುವಿನ ರುಚಿಯನ್ನು ಕಂಡವರು, ಮಧುವನವನ್ನು ಕಾಣಬಯಸಿದರು.

ಒಂದು ಮುಂಜಾನೆ, ಬಹಳ ದಿನದಮೇಲೆ, ಶೈಲ ಪ್ರಯೋಗಶಾಲೆಯಿಂದಲೇ ತಾನು ನೀರೆರೆದು ಬೆಳೆಸಿದ ಅನೇಕ ಹೂಗಿಡಗಳನ್ನು ನೋಡಲು, ಬೆಳಕು ಕಂಡಿಯ ಹತ್ತಿರ ಬಂದು ನಿಂತ. ಸಮೃದ್ಧಿವನದಲ್ಲಿ ತೂರಾಡುತ್ತಿದ್ದ ಪುಷ್ಪಗಳು ಉಲ್ಲಾಸದಿಂದ ಮರೆಯುತ್ತಿದ್ದುದನ್ನು ಕಂಡ. ಪೂರ್ಣವಾಗಿ ಪುಷ್ಪರಾಶಿಯ ಮಧ್ಯೆ ಅಪರಿಚಿತ ತರುಣಿಯೊಬ್ಬಳು ತೋಟದಲ್ಲಿ ಸುತ್ತಾಡುತ್ತಿರುವುದು ಅವನ ದೃಷ್ಟಿಗೆ ಬಿತ್ತು. ಆಸಕ್ತಿಯಿಂದ ನೋಡಿ ಬರುತ್ತಿದ್ದ ತರುಣಿಯನ್ನು ಕಂಡ ಶೈಲನಿಗೆ ಅತ್ಯಾಶ್ಚರ್ಯವಾಯಿತು.

ನಾನು ಬೆಳೆಯುವ ಉದ್ಯಮದಲ್ಲಿದ್ದೇನೆ ನನಗೆ ಆಪ್ತರೆನಿಸಿದವರು ಹಲವರಿದ್ದರು. ಅವರೆಲ್ಲರೂ ದೂರವಾಗಿದಾರೆ. ಅವರೆಲ್ಲ ಉಳಿದಿರುವರೋ ಇಲ್ಲವೋ ಹೇಳಲು ಸಾಧ್ಯವಿಲ್ಲ. 'ಗ್ಲೇವ್ಯೂ'ಭವನದಲ್ಲಿ ಅಧಿಕಾರಿಯಿಂದ ಕೆಲಸ ಸ್ವಾಧೀನಪಡೆದುಕೊಂಡ ನಾನು, ಸೋಮಯ್ಯನನ್ನು ಮಾತ್ರ ಬಲ್ಲೆ. ರುದ್ರ ಮತ್ತು ಮಿಕ್ಕ ಆಳುಗಳೆಲ್ಲ ನನಗೆ ಪರಿಚಿತರೆ. ಈ ತರುಣಿಯಾರು ? ಯಾರೇನು ? ರಾಜಸದನದಲ್ಲಿ ಬಂದಿಳಿದಿರುವ ರಾಜಶ್ರೀಯಿರಬೇಕು ! ಎಂದು ಊಹಿಸಿದ ಶೈಲ.

ಸೌಧದಲ್ಲಿ ಇರುವಾಗ ಕೊರಗು-ಕಷ್ಟದ ಮಾತೇಕೆ ನನಗೆ ? ಬಾಳಿಗೊಂದು ಭಂಡಾರಬೇಕು. ಬಾಳು ನಿರುತ್ಸಾಹದಲ್ಲಿ ಮುಗಿಯಬಾರದು, ಬಲವಾದ ಸಂಯಮ ಹಿಡಿದು, ಪ್ರಯೋಗಶಾಲೆ ಸೇರಿಹೋಗಿದೇನೆ ಎಂದುಕೊಂಡ. ಆಗವನಿಗೆ, ಹಿಂದೆ ಸಂಭಾವಿತರನೇಕರು, ದಿವ್ಯಾದರ್ಶಗಳನ್ನು ಅನುಭವಮಾಡಿಕೊಟ್ಟಿದುದು ಜ್ಞಾಪಕಕ್ಕೆ ಬಂದಿತು. ಸಂಭಾಷಣೆಯಲ್ಲಿ ನಾನು ಭಾಗವಹಿಸುತ್ತಿದ್ದೆ, ಆಗ ಜ್ಞಾನವಿಕಾಸಕ್ಕೆ ಹಾದಿಯಿತ್ತು. 'ಗ್ಲೇವ್ಯೂ' ಅಜ್ಞಾತವಾಸದಲ್ಲಿ, ಜ್ಞಾನಕ್ಕೆ ಮಂಕು ಕವಿದಿದೆ ಎಂದು ನೊಂದುಕೊಂಡ.

ಬೆಳಕು ಕಂಡಿಯಲ್ಲಿ ಶೈಲನ ದೃಷ್ಟಿಗೆ ಬಿದ್ದ ರಾಜಶ್ರೀ, ಅವನು ನೆನೆದಂತೆ ರಾಜಸದನಕ್ಕೆ ಸಂಬಂಧಿಸಿದವಳಾಗಿದ್ದಳು. ತೋಟದಲ್ಲಿ ಸುತ್ತಿ, ತೋಟಗಾರನ ಕೌಶಲಕ್ಕೆ ಮೆಚ್ಚಿಹೋಗಿದ್ದಳು. ಸೋಮಯ್ಯ, ಸೌಧದಲ್ಲಿರುತ್ತಿದ್ದುದರಿಂದ, ತರುಣಿ ಹೆಚ್ಚು ವಿಚಾರ ತಿಳಿದುಕೊಳ್ಳಲಾಗಲಿಲ್ಲ. ಸೋಮಯ್ಯನ ಸಹಾಯ ವಿಲ್ಲದಿದ್ದಾಗ, ರುದ್ರನ ಜತೆ ಅವಳಿಗೆ ಅನುಕೂಲವಾಯಿತು.

ಬೆಳೆದುಬಂದ ಪರಿಚಯದಿಂದ ತರುಣಿ ರುದ್ರನೊಂದಿಗೆ ನಿತ್ಯವೂ ಸಂಜೆ ಯಾನಂತರ ಸುತ್ತಾಡುವ ಪರಿಪಾಠವಿಟ್ಟುಕೊಂಡಿದ್ದಳು. ಸಸ್ಯ, ಶೋಧನೆ, ಪುಷ್ಪ, ಪರಿಮಳ, ಪ್ರಯೋಗಶಾಲೆ ಮುಂತಾದ ತುಂಡು ತುಂಡು ವಿಷಯ ಗಳನ್ನು ರುದ್ರ, ತರುಣಿಗೆ ವಿವರಿಸುತ್ತಿದ್ದ. ನಿತ್ಯವೂ ಸುತ್ತಾಡಿ ಬರುತ್ತಿದ್ದವರು, ಒಂದು ದಿನ ಪ್ರಯೋಗಶಾಲೆಯ ಹತ್ತಿರ ಬಂದರು.

ವನಮಾಲಿಯ ಕಲಾಕೃತಿಗಳಂತಿದ್ದ ಹೂಗಿಡಗಳನ್ನು ಮಾತ್ರ ನೋಡಿ ಆನಂದಿಸುತ್ತಿದ್ದ ತರುಣಿ, ತೋಟಗಾರ ಯಾರೆಂದು ರುದ್ರನನ್ನು ಕೇಳಿದಳು. ತೋಟಗಾರ, ಅವನ ದಿನಚರಿ, ಕಾರ್ಯಾಚರಣೆಯನ್ನು ಸೂಕ್ಷ್ಮವಾಗಿ ರುದ್ರ ತಿಳಿಸಿದ. ಸಹಜವಾಗಿ ತರುಣಿಗೆ, ಪ್ರಯೋಗಶಾಲೆಯನ್ನು ಪ್ರವೇಶಿಸಿ, ತೋಟ ಗಾರನನ್ನು ಕಾಣುವ ಇಚ್ಛೆಯಾಯಿತು. ಮೊದಲಾಗಿ ಅವಳು ರುದ್ರನೊಂದಿಗೆ ಪ್ರವೇಶಿಸಿದಳು.

ಅಂಜಿಕೆಯಿಂದಲೇ ರುದ್ರ ಪ್ರಯೋಗಶಾಲೆ ಪ್ರವೇಶಮಾಡಿದ. ಶ್ರೀಮಂತ ತರುಣಿಯ ಇಚ್ಛೆಗನುಸಾರವಾಗಿ ಅವನು ಶೈಲನ ಅಪ್ಪಣೆಯಿಲ್ಲದೆಯೇ ಅಲ್ಲಿಗೆ ಕರೆದುತಂದ. ಆಗ ಕುಂಡಗಳಲ್ಲಿ ಶೈಲನ 'ನ್ಯೂಡ್ವಾರಫ್,' 'ಸಕ್ಲವರ್,' 'ಕ್ಯಾಸ್ಟ್ರಿಯಾ' ಮೊದಲಾದ ಹೂಗಿಡಗಳು ಚಿಗುರಿ ನಿಂತಿದ್ದವು. ತೋಟದ ಬೆಳಕನ್ನು ಕಾಣುವ ಸಲುವಾಗಿ ಸಿದ್ಧವಾಗಿದ್ದವು.

ಶೈಲ ಅಂದು ಪ್ರಯೋಗಮಂದಿರದಲ್ಲಿರಲಿಲ್ಲ. ಈ ಕಾರಣದಿಂದ ತರುಣಿ ವನಮಾಲಿಯನ್ನು ನೋಡಲಾಗಲಿಲ್ಲ. ಸೌಧಕ್ಕೆ ಹಿಂದಿರುಗಿದಳು.

ಟೋಕಿಯೋ ನಗರದ ಮೇಲೆ ಮಿತ್ರರಾಷ್ಟ್ರದವರು ಆಗ ಧಾಳಿ ನಡಿಸುತ್ತಿ ದ್ದರು. ಹದಿನಾಲ್ಕನೇ ಸೈನ್ಯಪಡೆ ರಂಗೂನ್‌ಕಡೆಗೆ ನುಗ್ಗುತಿತ್ತು. ಭೂಪಟ ವನ್ನು ಹರಡಿಕೊಂಡು ಶೈಲ, ಯುದ್ಧವಿವರ ನೋಡಿ ತಿಳಿಯುತ್ತಿದ್ದ. ಹಗಲು

ಕಳೆದು ಇರುಳಾದರೂ ಶೋಧನಾಲಯ ಬಿಟ್ಟು ಅವನು ಹೊರಡುತ್ತಿರಲಿಲ್ಲ. ದೀಪಹೊತ್ತಿಸಿ, ನೀರವ ಸಾಮ್ರಾಜ್ಯಗಳಲ್ಲಿಯೇ ಇರುತ್ತಿದ್ದ.

ತೋಟಗಾರನ ಮಹತ್ವಚಿಂತನೆಯಲ್ಲಿದ್ದ ತರುಣಿ, ಬಹಳ ಹೊತ್ತಿನವರೆ ವಿಗೂಢ್ಶೈಲನ ಪ್ರಯೋಗಶಾಲೆಯಲ್ಲಿ ದೀಪಉರಿಯುತ್ತಿದ್ದುದನ್ನು ಕಾಣುತ್ತಿದ್ದಳು. ಹೂ ಬೆಳವಣಿಗೆಯಿಂದ ರಂಜನೆಯವರೆವಿಗೂ ತೋಟಗಾರನ ಕೈವಾಡವಿದೆ. ಅವನ ವಿಷಯವೇನೂ ನನಗೆ ತಿಳಿಯದು. ಮಿಕ್ಕವರು ಯಾರೂ ಅವನ ವಿಷಯದಲ್ಲಿ ಅವಿಶ್ವಾಸ ತೋರುತ್ತಿಲ್ಲ. ತೋಟಗಾರನ ನೆಲೆಯೇನು? ಸಾಮರ್ಥ್ಯವೇನು? ಎಂಬ ವಿಷಯ ತಿಳಿಯಲು ಅವಳು ಸಾಹಸ ನಡೆಸಿದಳು.

ತರುಣಿ ಕೈಗೊಂಡ ಸಾಹಸ ಮುಂದುವರಿಯಿತು. ಬೆಳೆದ ಹೂಗಳನ್ನು ನೋಡುತ್ತಿದ್ದೇನೆ. ಬೆಳೆಯುವವನನ್ನು ಮಾತ್ರ ನೋಡುತ್ತಿಲ್ಲ; ಇರುಳಲ್ಲಿ ತೋಟಗಾರನ ವಿಶ್ರಾಂತಿಭವನದ ಕಡೆಗೆ ಕದ್ದುಹೋಗುವುದು, ಇಡೀ ರಾತ್ರಿ ಉರಿಯುವ ದೀಪದೊಂದಿಗೆ ಏನು ಸಾಹಸ ನಡಿಸುತ್ತಿರುವನೋ ತಿಳಿಯುವುದು ಎಂದು ನಿಶ್ಚಯಿಸಿದಳು. ಅವಳು, ಈ ಸಾಹಸಕ್ಕೆ ಯಾರ ಸಹಾಯವನ್ನು ಕೋರಲಿಲ್ಲ. ವನಮಾಲಿಯ ಮುಖಾವಲೋಕನ ಮಾಡಿಯೇ ತೀರಬೇಕೆಂಬ ಯತ್ನಕ್ಕೆ ಸಹಾಯ ಆವಶ್ಯಕವಾಗಿರಲಿಲ್ಲ.

ಅಂದು ರಾತ್ರಿ, ತೋಟಗಾರ ಶೈಲ ಭೂಪಟವನ್ನು ಹರಡಿಕೊಂಡು ಮಗ್ನನಾಗಿದ್ದ. ಸದ್ದುಮಾಡದೆ ಕದ್ದುಬಂದ ತರುಣಿ, ಬೆಳಕು ಕಂಡಿಯ ಹತ್ತಿರ ನಿಂತಳು. ಒಂದು ಸಾರಿ ಇಣಿ [illegible] ನಮಾಲಿಯನ್ನೂ ಅವನು ನಡಿಸುತ್ತಿದ್ದ ಕೆಲಸವನ್ನೂ ನೋಡಿ; ತೃಪ್ತಳಾಗಿ ಹಿಂದಿರುಗಿದಳು. ಶೈಲ ಮೂಕನಾಗಿ ಕುಳಿತು, ಭೂಪಟದಲ್ಲಿ ಯಾವುದನ್ನೋ ಗುರುತಿಸುತ್ತಾ ಬೆರಳುಗಳನ್ನು ಆಡಿಸುತ್ತಿದ್ದ.

೧೭

ತೋಟಗಾರನ ನೆಲೆಯಲ್ಲಿ ಪುಸ್ತಕವಿದೆ, ಸಸ್ಯಜಾತಿಯ ಗಿಡಗಳಿವೆ, ಪತ್ರಿಕಾರಾಶಿಯಿದೆ, ಅವನು ವಿದ್ಯಾವಂತನಿರಬಹುದು. ಉತ್ತಮ ತರದ ಸಾಧನಕ್ಕೆ ಯತ್ನಿಸುತ್ತಿರಬಹುದು. ಮರೆಯಲ್ಲಿ ಕಂಡುದಾಯಿತು. ಅವನ ಕಲಾಶಾಲೆಯೆಂತಿರುವ ನೆಲೆಯಲ್ಲಿ ಏನಿದೆಯೋ ಪೂರ್ಣವಾಗಿ ತಿಳಿಯಬೇಕೆಂದು ತರುಣಿ ಆಶಿಸಿದಳು.

ಹಣ್ಣು ತುಂಬಿದ ಬುಟ್ಟಿಯೊಂದನ್ನು ಹೊತ್ತು ರುದ್ರ, 'ಗ್ಲೇವ್ಯೂ' ಭವನಕ್ಕೆ ತಂದ. 'ಹೂವು ಆಯ್ದು ಬಾರೆಂದು' ತರುಣಿ ರುದ್ರನಿಗೆ ಹೇಳಿ ಕಳುಹಿಸಿದಳು. ಸೋಮಯ್ಯ, ಅವಳ ಕೋರಿಕೆಯಂತೆ ನಾನಾವಿಧದ ಹೂಗಳನ್ನು ಕಳುಹಿ ಕೊಟ್ಟ. 'ಎಷ್ಟು ಬಗೆಯ ಹೂವನ್ನು ಇಲ್ಲಿ ಬೆಳೆಯುತ್ತಾರೆ!' ಎಂದು ಅಚ್ಚರಿ ಗೊಂಡ ತರುಣಿ ಸಂತೋಷಿಸಿದಳು.

ವನದಲ್ಲಿ ತೋಟಗಾರ ದೀಪಹಚ್ಚಿದ್ದಾನೆ. ವಿಶ್ವಾತ್ಮಜ್ಯೋತಿಯನ್ನು ಬೆಳಗುತ್ತಿದ್ದಾನೆ! ಒಂದು ಸುಂದರವಾದ ಹೂವಿನ ಬೆಳವಣಿಗೆಯ ಪೂರ್ಣ ಜ್ಞಾನವು ನಮಗಿರುವುದಿಲ್ಲ. ಈ ನಿಸರ್ಗದೇವತೆಯ ಭೂಮಿ ಭಂಡಾರದಲ್ಲಿ, ವನಮಾಲಿ ಬಗೆಬಗೆಯ ಹೂಗಳನ್ನು ಪರಿಚಯಮಾಡಿಕೊಂಡು; ಸೌರಭ ತೋರುತ್ತಿದ್ದಾನೆ, ಎಂಬ ಹೆಗ್ಗಳಿಕೆಯನ್ನು ತರುಣಿ ಕಂಡುಕೊಂಡಳು.

ತೋಟಗಾರನಿಗೆ ತೋಟವೂ ಜೀವವೂ ಏಕಮುಖವಾಗಿರಬೇಕು. ಹುಲ್ಲು ಗಾವಲು, ಪೈರು, ಮೊಳಕೆ, ಹೂಗಳನಷ್ಟು ಮಾತ್ರ ನೋಡುತ್ತಿದ್ದೇನೆ. ತೋಟ ಗಾರನನ್ನು ಕಾಂಬುವ ದೃಷ್ಟಿಯಿದ್ದರೂ ಭೇಟಿಯಾಗುವ ಸಮಯ ಸಿಕ್ಕಲಿಲ್ಲ. ಪ್ರಯೋಗಶಾಲೆಯನ್ನು ಮತ್ತೊಮ್ಮೆ ಪ್ರವೇಶಿಸಿ ಕಾಣುವುದೆಂದುಕೊಂಡಳು. ರುದ್ರನೊಂದಿಗೆ, ಪ್ರಯೋಗಶಾಲೆಯನ್ನು ಕಾಣುವ ಹಂಬಲದಿಂದಲೇ ಹೊರಟಳು.

'ಮಾನವನಿಗಿರುವ ಆದರ್ಶಗಳು ಸೂತ್ರದ ಗೊಂಬೆಯಂತೆ ಮಾತ್ರ ಇರಲಾರವು' ಎಂಬುದನ್ನು ನಿಜಪಡಿಸಲು ಶಾಶ್ವತವಾದ ಕೆಲಸದಲ್ಲಿ ತೊಡಗಿದ್ದ ಶೈಲ. ದೇಶದೇಶ ಅಲೆದು ಬಂದುದಾಗಿದೆ. ಅಲೆದಾಟ ಸಾಕು. ಜೀವಂತನಾ ಗಿರುವಾಗಲೇ ಇತರರು, ನನ್ನ ಹೆಸರನ್ನು ಹಾಡಿ ಹರಿಸುವುದನ್ನು ಕಾಣಬೇಕು, ಸರ್ವವನ್ನೂ ತ್ಯಜಿಸಿ ಹೆಸರನ್ನು ಗಳಿಸಬೇಕು, ಎಂಬ ಆಲೋಚನೆ ಅವನಿಗೆ ಹೊಳೆಯಿತು. ಅರಸರ ಮತ್ತು 'ಗ್ಲೇವ್ಯೂ' ಅಲ್ಲಿ ಬಂದಿಳಿದವರ ನೆನಪಾದೊಡ ನೆಯೇ ಶೈಲನ ಆಶಾಕಾಂಕ್ಷೆಗಳೆಲ್ಲ ಮುರಿದುಬೀಳುತ್ತಿದ್ದವು. ಒಬ್ಬರನ್ನು ಮೆಚ್ಚಿಸಲು ಹೋಗುವುದಕ್ಕಿಂತಲೂ ಆಳವಾದ ತತ್ವಶೋಧನೆಯಲ್ಲಿದ್ದು, ಅಪೂ ರ್ವವಾದುದನ್ನು ಬೆಳೆದು ಸಂತೋಷ ಪಡೆಯುವಾ ಎಂದುಕೊಂಡಿದ್ದ. ಆಗ, ನಕ್ಷತ್ರಾಕಾರದ ಥಳಥಳಿಸುವ ಹೂವು ಪ್ರಯೋಗಶಾಲೆಯಲ್ಲಿ ಇತರ ಹೂಕುಂಡ ಗಳೊಂದಿಗೆ ಮೆರೆಯುತಿತ್ತು.

ತರುಣಿ, ಎರಡನೆಯಸಾರಿ ಪ್ರಯೋಗಶಾಲೆಗೆ ಬಂದಳು. ಅನೇಕ ರೋಜಾತುಂಡುಗಳು ಚಿಗುರಿ ಹೂಕುಂಡದಲ್ಲಿ ಬೆಳೆಯುತಿತ್ತು. ಹೊರಗೆ ವಿಪರೀತವಾಗಿ ಮಳೆಯು ಬೀಳುತ್ತಿದ್ದುದರಿಂದ ಅವುಗಳೆಲ್ಲ ಶೋಧನೆಯ ಗೃಹದಲ್ಲಿಯೇ ಇದ್ದವು. ಮುಂದೆ ಅತ್ಯುತ್ತಮವಾದ ಹೂಗಳು ಬೆಳೆಯುವುದನ್ನು ಕಾಣಬಹುದಾಗಿತ್ತು. ನಿಶ್ಚಲವೂ ಪ್ರಶಾಂತವೂ ಆದ ಪ್ರಯೋಗಶಾಲೆಯಿಂದ ತರುಣಿ, ಶೈಲನ ಬಿಡಾರಕ್ಕೆ ಬಂದಳು. ಶೈಲ ಅಲ್ಲಿರಲಿಲ್ಲ. ಬಿಡಾರದಲ್ಲಿದ್ದ ಪುಸ್ತಕರಾಶಿ ಕಡೆಗೊಮ್ಮೆ ಅವಳು ಕೈಹಾಕಿದಳು. ಕೈಗೊಂದು ಗ್ರಂಥ ಸಿಕ್ಕಿತು. ಅದು ರೋಜಾ ಹೂ ಬೆಳವಣಿಗೆಗೆ ಸಾಧಕವಾದ ಶೈಲನ ಪುಸ್ತಕವಾಗಿತ್ತು. 'My Experiment on Roses in the Plains of India' ಎಂಬ ಪುಸ್ತಕದಿಂದ ಸಹಾಯ ಅವನು ಪಡೆಯುತ್ತಿದ್ದ. ಆಕರ್ಷಣೀಯ ವಸ್ತುಗಳು ಒಂದೊಂದಾಗಿ ತರುಣಿಗೆ ಗೋಚರವಾಯಿತು. ಪೆಟ್ಟಿಗೆಯ ಮಾಪರಿಯಂತಿದ್ದ ಸಣ್ಣಪುಸ್ತಕವೊಂದನ್ನು ಅವಳು ಹಿಡಿದು ನೋಡಿದಳು. ಪುಸ್ತಕದ ಮೊದಲನೆಯ ಪುಟದಲ್ಲಿ, ಅವಳಿಗೆ ಪರಿಚಿತರಾದ ಹಿರಿಯರೊಬ್ಬರ ಹಸ್ತಾಕ್ಷರವಿತ್ತು. ಮುಂದೆ ಯಾವುದನ್ನೂ ನೋಡುವ ಮನಸ್ಸಾಗಲಿಲ್ಲ. ಅಸಮಾಧಾನದಿಂದಲೇ ಅವಳು ಹಿಂದಿರುಗಿದಳು.

ತೋಟಗಾರನ ಅದ್ಭುತ ಶಕ್ತಿಯನ್ನು ಪರೀಕ್ಷಿಸುವ ಕಾಲದಲ್ಲಿ, ಹೊಸ ಸಮಸ್ಯೆಯೊಂದು ಕೂಡಿಕೊಂಡಿತು. ಅವನ ಬಿಡಾರದಲ್ಲಿ ಈ ಹಸ್ತಾಕ್ಷರವುಳ್ಳ ಪುಸ್ತಕ ಹೇಗೆ ಬಂದಿತು? ಎಂದು ತರುಣಿ ಚಿಂತಿಸಿದಳು. ನಿಟ್ಟುಸಿರುಬಿಟ್ಟು ಚಿಂತಿಸುತ್ತಿದ್ದ ತರುಣಿ-ಪ್ರಭೆಯೇ ಆಗಿದ್ದಳು. ಹಸ್ತಾಕ್ಷರ ನೋಡಿದವಳು, ಹೇಮಂತರನ್ನು ನೆನೆದಳು. ಕೂಡಲೇ ಹೇಮಂತರಿಗೂ ತೋಟಗಾರನಿಗೂ ಹೇಗೆ ಪರಿಚಯ ಬೆಳೆಯಿತು? ಎನ್ನುವ ವಿಷಯ ಕುತೂಹಲವನ್ನುಂಟುಮಾಡಿತು. ಎಲ್ಲವನ್ನೂ ಅವನಿಂದಲೇ ತಿಳಿಯಬೇಕು, ತಿಳಿಯುವ ಬಗೆಯು ಮಾತ್ರ ಹೊಳೆಯುತ್ತಿಲ್ಲ ಎಂದು ಪರಿತಪಿಸಿದಳು.

ದುಃಖ ಮಿತಿಮೀರಿತು. ಪ್ರಭೆ, ರಮ್ಯವನದಲ್ಲಿ ಸುತ್ತಾಡುವುದನ್ನು ಬಿಟ್ಟಳು. ಹೃದಯದ ಬೇನೆ, ಪರಿತಾಪದ ಅಳಲು ಹೆಚ್ಚಿದಾಗ, ಸೌಧದ ಸೌಂದರ್ಯ, ಪೈರುಪಚ್ಚೆಯ ನೆಲೆ, ಎಲ್ಲವೂ ಅಡಗಿ ಕೂತಂತೆ ಅವಳಿಗೆ ತೋರುತ್ತಿತ್ತು.

'ಗ್ಲೆನ್ವ್ಯೂ' ಅರಸರು ಚೌಧುರಿಯವರಿಗೆ ಆಪ್ತರು. ನಿಲ್ಲಲು ಕೋರಿದಾಗಲೇ ಅರಸರು ಅನುಮತಿ ಅವರಿಗೆಯಿತ್ತರು. ಅಜ್ಜ-ಮೊಮ್ಮಗಳು ಸೌಧದಲ್ಲಿ ಬಂದಿಳಿದರು. ಶೈಲನಿಗೆ ಯಾವುದೂ ತಿಳಿಯಲಿಲ್ಲ. ಪ್ರಭಾ ನಡೆಸಿದ ಎರಡು ಬಾರಿಯ ಅನ್ವೇಷಣೆಯಲ್ಲಿ, ಶೈಲ ದೂರವಾಗಿದ್ದ. ಅಲ್ಲದೆ, ಅವನು ಯಾರನ್ನೂ ಲಕ್ಷ್ಯಕ್ಕೆ ತಂದುಕೊಳ್ಳುವ ಸ್ಥಿತಿಯಲ್ಲಿಯೇ ಇರಲಿಲ್ಲ.

ಯುದ್ಧಭೀತಿಯ ತಾರುಮಾರಿಗೆ ಸಿಕ್ಕಿದ ಚೌಧುರಿಯವರು, ದೂರ ಪ್ರದೇಶವನ್ನು ಆರಿಸುತ್ತಾ ನೀಲಗಿರಿಗೆ ಬಂದರು. ಅವರಿಗೆ ಅರಸರ ಸೌಧ ದೊರೆಯಿತು. ಬೇರೂರಿದ ಕೊರತೆ ಮರೆಯಲು, ಸುಧಾರಿಸಿಕೊಳ್ಳಲು, ಅವರು ಪ್ರಭೆಯೊಂದಿಗೆ ನಿಂತರು. ತೋಟಗಾರನಲ್ಲಿ ಮಹತ್ವಕಂಡ ಪ್ರಭಾ, ಶೋಧನೆಯಲ್ಲಿ ನಿಂತಳು. ಮನಶ್ಶಾಂತಿಯಿಲ್ಲದ ಚೌಧುರಿಯವರು ಮಾತನಾಡದೆಯೇ ಕೊರಗುತ್ತಿದ್ದರು.

ಚೌಧುರಿಯವರ ಮಾನಸಿಕಯಾತನೆ ತೀರ ಹಣ್ಣಾಯಿತು. ದೇಹ ಕುಗ್ಗಿ, ಬಲವಾದ ಕೆಮ್ಮು ಅವರನ್ನು ಪೀಡಿಸಲಾರಂಭಿಸಿತು. ಸೌಧ ಬಿಟ್ಟು ಬರಲಾರದೆ ಅವರು ಹಾಸಿಗೆ ಹಿಡಿದರು. ಅವರು ಎಚ್ಚೆತ್ತು, ಉತ್ತಮಗೊಳ್ಳುವ ವೇಳೆಗಾಗಲೇ, ಪ್ರಭಾ ವನಶ್ರೀ ಶೋಧನೆಯನ್ನು ಆರಂಭಮಾಡಿಬಿಟ್ಟಿದ್ದಳು. ಶೋಧನೆಯ ನಡುವೆ, ಸಮಸ್ಯೆ ಅಡ್ಡಬಂದು, ಅವಳು ದುಃಖ ನೆನೆಯುವಂತೆ ಮಾಡಿತು. ಅಜ್ಜವೊಂದುಕಡೆ, ಮೊಮ್ಮಗಳೊಂದುಕಡೆ, ಒಂದೇ ವ್ಯಕ್ತಿಗಾಗಿ ಚಿಂತಿಸುತ್ತಿದ್ದರು. ಕ್ಷಣಭಂಗುರ ನಪೃಶರಾದ ಅರಸರನ್ನೇ ಅಲಕ್ಷಿಸಿದ ಶೈಲ, ಶ್ರೀಮಂತ ತರುಣಿಯಾದ ಪ್ರಭೆಯನ್ನು ಗಣನೆಗೆ ತಾರಲಿಲ್ಲ. ಅವಳು ಅರಸರ ಪೈಕಿ ಶ್ರೀಮಂತಳೊಬ್ಬಳು, ತೋಟದಲ್ಲಿ ಸುಳಿಯುತ್ತಿದ್ದಾಳೆ ಎಂದು ದೂರವಾಗಿರುತ್ತಿದ್ದ ಶೈಲ. ತೋಟದಲ್ಲಿ ಆಸಕ್ತಿ ತೋರುತ್ತಿರುವವಳು, ಅರಸರ ಕಡೆಯವಳಲ್ಲ; ಪ್ರೊಫೆಸರ್ ಹೇಮಂತರ ಕುಮಾರಿ-ಪ್ರಭೆಯೆನ್ನುವುದು, ಶೈಲನಿಗೆ ಗೊತ್ತಾಗಲಿಲ್ಲ.

ತೋಟಗಾರ ಯಾರು? ಅವನ ಹಿರಿಮೆಯೇನು? ಎಂದು ಕಂಡ ಪ್ರಭೆಯಂತೆ, ಚೌಧುರಿಯವರೂ ಬಂದೂ ಕಾಣಲಿಲ್ಲ. ಜೀವನವೇ ಸಾಕಾಗಿ, ಕಂದುಹೋಗುತ್ತಿದ್ದವರು; ತೋಟಗಾರರನ್ನು ಹೇಗೆ ನೋಡಿಯಾರು?

ಆಗುಂತಕ ವ್ಯಕ್ತಿಯಾಗಿದ್ದ ಶೈಲನಿಂದ, ಚೌಧುರಿಯವರಿಗಾದರೂ ಏನು ಪ್ರಯೋಜನ? ಪ್ರಭಾ, ಚೌಧುರಿ, ಶೈಲಾ, ಒಬ್ಬರನ್ನೊಬ್ಬರು ಅರಿಯದೆ 'ಗ್ಲೆನ್‌ವ್ಯೂ' ಅಲ್ಲಿ ಬೇರೆಬೇರೆಯಾಗಿದ್ದು ಕಾಲ ದೂಡುತ್ತಿದ್ದರು.

೧೮

ಹೇಮಂತರನ್ನು ತಿರಸ್ಕಾರ ಮಾಡಿ ಕಳುಹಿಬಿಟ್ಟ ಚೌಧುರಿಯವರ ನೆಮ್ಮದಿ ನೆಟ್ಟಗೆ ಬಹಳ ದಿನವಿರಲಿಲ್ಲ. ಅವರ ಅಹಂಕಾರ, ಠೀವಿ, ಸ್ವಲ್ಪವೂ ಕಡಿಮೆಯಾಗದೇಯೋಯಿತ್ತು. ಯುದ್ಧ ಬೇರೆ ಆವರಿಸಿ ಬಂದಾಗ, ಅವರ ಚೈತನ್ಯ ಕುಂದುತ್ತ ಬಂತು. ವಿಶೇಷ ಮಾರ್ಪಾಡುಗಳಾಗಿ ಹೋದುದನ್ನು ಕಂಡ ಚೌಧುರಿಯವರಿಗೆ ಜ್ಞಾನೋದಯವಾಯಿತು. ಪ್ರಭೆಯನ್ನು ಹೇಮಂತರೊಂದಿಗೆ ಕಳುಹಿಸಿಬಿಟ್ಟಿದ್ದರೆ, ನಾನು ದೇಶ ದೇಶ ಅಲೆಯಬೇಕಾಗುತ್ತಿರಲಿಲ್ಲ. ಈ ಪ್ರಕೃತ ಸ್ಥಿತಿಗೂ ಕಾರಣನಾಗುತ್ತಿರಲಿಲ್ಲ. ರೋಗರುಜಿನಗಳು ನನ್ನನ್ನು ಬಾಧಿಸುತ್ತಲೂ ಇರಲಿಲ್ಲ. ಮುಪ್ಪಿನ ತೀವ್ರಗತಿಯಲ್ಲಿ ನಾನಿದ್ದೇನೆ. ನನ್ನ ಪರ್ಯಟನ ನೀಲಗಿರಿಯಲ್ಲಿಯೇ ಮುಗಿಯುವುದಾದರೆ ಪ್ರಭೆಗೆ ಹೊಣೆಯಾರು? ಎಂಬ ಚಿಂತೆ ಅವರನ್ನು ಕೊಡಿತು.

ಮುಂದೇನು ಸಂಭವಿಸುವುದೋ ಹೇಳಲಾಗುವುದಿಲ್ಲ. ಕಳೆದುಹೋದ ಘಟನಾವಳಿಯನ್ನು ನೆನೆದರೆ ಹೇಮಂತರನ್ನು ಪುನಃ ಕಾಣಲು ಸಾಧ್ಯವಿಲ್ಲವೆಂದು ತಿಳಿಯುತ್ತೇನೆ. ಪ್ರಭೆಯನ್ನು ಸಂತೈಸುವುದು ಹೇಗೆ? ನನ್ನ ಹಿತಚಿಂತನೆ ಬಗೆದು, ತಂದೆಯನ್ನು ದೂರಮಾಡಿದೆಯೆಂದು ಅವಳು ತಿರಸ್ಕಾರ ಮಾಡಿದರೆ ಉಪಾಯವೇನು? ಈ ಕಾರಣಕ್ಕೆಲ್ಲ ಮುಖ್ಯನಾದವನು ನಾನಾಗಿದ್ದೇನೆ, ನಾನು ಅಪಮಾನ ಮಾಡಿ ಹೇಮಂತರನ್ನು ಕಳುಹಿಸಿಕೊಟ್ಟುದುದು, ಈಗ ಕೇಡಾಯಿತೆಂದು ಪೂರ್ಣ ಕಾಣುತ್ತಿದ್ದೇನೆ ಎಂದು ಪರಿತಾಪಪಟ್ಟರು.

ಸ್ಥಿತಿಯು ತೀರ ಕೆಟ್ಟು, ತಮ್ಮ ತಪ್ಪನ್ನೆಲ್ಲಾ ಚೌಧುರಿಯವರು ಪ್ರಭೆಯ ಮುಂದೆ ಒಪ್ಪಿಕೊಂಡರು. ಸಂಕ್ಷಿಪ್ತವಾಗಿ 'ಹೇಮಂತರು ಬರ್ಮ ಬಿಟ್ಟಿರುತ್ತಾರೆ. ನಾವು ನೀಲಗಿರಿಯಲ್ಲಿರುವುದು ಅವರಿಗೆ ತಿಳಿಯದು. ಕಟಕ್ ನಗರಕ್ಕೆ ಒಂದು ವೇಳೆ ಅವರು ಬಂದಲ್ಲಿ, ನಾವು ನೀಲಗಿರಿಯಲ್ಲಿರುವ ವಿಚಾರ ತಿಳಿಯುವುದು. ಪ್ರಭಾ; ನಾನು ಉಳಿಯುವುದು ಅಸಾಧ್ಯ. ಧೈರ್ಯದಿಂದಿರಬೇಕಾದುದು

ನಿನ್ನ ಕರ್ತವ್ಯವಾಗಿದೆ. ನನ್ನ [illegible]ತ ಸಂಪತ್ತು, ಹುಟ್ಟುವಳಿ ನಿನಗೆ ಎಲ್ಲವೂ ಈಗಾಗಲೇ ಗೊತ್ತಿದೆ [illegible]ವ ನೀಲಗಿರಿಯಲ್ಲಿಯೇ ಮುಗಿದುಹೋದಲ್ಲಿ, ನೀನು ಕಟಕ್ ನಗರಕ್ಕೆ ಹಿಂದಿರುಗು. ಹೇಮಂತರು ನಿನ್ನನ್ನು ಅಲ್ಲಿ ಬಂದು ಕಾಣುವುದು ನಿಶ್ಚಯ' ಎಂದು ಕೊನೆಯ ಮಾತನ್ನು ಅತಿ ಸಂಕಟದಿಂದ ಹೇಳಿ ಮುಗಿಸಿದರು.

ಚೌಧುರಿಯವರ ಕ್ಷೀಣ ಸ್ಥಿತಿಯನ್ನರಿತ ಪ್ರಭಾ, ಎಲ್ಲವನ್ನೂ ತಿಳಿದು ಕೊಂಡಳು. ದುಃಖ ಪ್ರದರ್ಶನದಿಂದ ಏನೂ ನಡೆಯಲಾರದು, ಇದು ಖಂಡಿತ ವೆಂದು ನಿಶ್ಚಯಿಸಿ, ಧೈರ್ಯ ತಂದುಕೊಂಡಳು. ಧೈರ್ಯದಿಂದಿರುವುದಲ್ಲದೆ ಮತ್ತೆ ಯಾವ ಉಪಾಯವೂ ಅವಳಿಗಿರಲಿಲ್ಲ. ಅಜ್ಜ ತನ್ನನ್ನು ಬಿಟ್ಟುಹೋಗು ವನೆಂದು ಅವಳು ಬಹಳ ಹೆದರಲಿಲ್ಲ, ಬದಲಾಗಿ ಚೌಧುರಿಯವರನ್ನು ಸಂತೈಸಿದಳು.

ಮಿತ್ರರಾಷ್ಟ್ರದವರ ಪ್ರಬಲ ಯುರೋಪಿನಲ್ಲಿ ಹೆಚ್ಚಾಗಿ, ಶತ್ರುಗಳು ಪಲಾಯನ ಮಾಡುತ್ತಿದ್ದರು. ಪರಿತಾಪದಿಂದ ಜೀವಚ್ಛವವಾಗಿದ್ದ ಚೌಧುರಿ ಯವರ ಸ್ಥಿತಿ ಸುಧಾರಿಸಿತು. ಪ್ರಭಾ ಮುಂಜಾಗ್ರತೆಯಲ್ಲಿಯೇ ಇದ್ದಳು. ಸೋಮಯ್ಯ, 'ಗ್ಲೆವ್ಯೂ' ಸೌಧದ ಕಾರ್ಯಭಾರಿಯಾಗಿದ್ದವನು ; ಸಹಾಯಕ ನಾಗಿದ್ದ. ಕ್ಷೋಭೆಗೊಂಡಿದ್ದ ಪ್ರಭೆಯ ಮನಸ್ಸು, ಸ್ಫೂರ್ತಿಗೊಂಡಿತು. ಅವಳು ಸಂಶಯ-ಸಂದೇಹಕ್ಕೆ ಕಾರಣನಾಗಿದ್ದ ತೋಟಗಾರನ ವಿಚಾರ ಮುಂದು ವರಿಸಿದಳು.

ಪ್ರತಿಷ್ಠಿತರಾದ ಚೌಧುರಿಯವರೊಂದುಕಡೆ, ಮಿತಭಾಷಿಯಾಗಿದ್ದ ತೋಟಗಾರ ಶೈಲ ಮತ್ತೊಂದುಕಡೆ ಇರುತ್ತಿದ್ದಾಗ, ಶೋಧನಾಲಯದಲ್ಲಿ ಸಮರ್ಪಕವಾಗಿ ಬೆಳೆದ ಒಂದೆರಡು ರೋಜಾಹೂಗಳು ಪ್ರಭೆಯ ಕೈಸೇರಿತು. ಹೆಚ್ಚು ವೇಳೆ ಸಂಶಯ ಸಂದೇಹದಲ್ಲಿ ನಿಲ್ಲಲು ಸಾಧ್ಯವಿಲ್ಲದ ಪ್ರಭಾ, ವಿಚಾರ ವನ್ನು ಚೌಧುರಿಯವರಿಗೆ ತಿಳಿಸುವಾಯೆಂದುಕೊಂಡಳು. ಅವರು ಚೇತರಿಸಿ ಕೊಳ್ಳುವ ಸ್ಥಿತಿಯಲ್ಲಿರುವಾಗ ಈ ಸೋಜಿಗದ ವಾರ್ತೆ, ಕೇಡುಮಾಡೀತೆಂದು ಮೌನ ತಾಳಿದಳು.

ಯುದ್ಧದಲ್ಲಿ ಜಯವು ಲಭಿಸುತ್ತಿದ್ದು, ಭಾರತಕ್ಕೆ ಪ್ರೋತ್ಸಾಹಕರವಾದ ಸಂಗತಿ ಮುಟ್ಟುತ್ತಿದ್ದವು. ಬೇಸಿಗೆ ಆಗ ಆರಂಭವಾಯಿತು. ದೂರದಲ್ಲಿ, ಬಹುದೂರದಲ್ಲಿ, ಮಹಾವಿಪ್ಲವ ನಡೆದುಹೋಗಿಶಾಂತವಾಗುತ್ತಿರುವ ಸಮಾಚಾರವನ್ನು ಶೈಲ, ಓದಿ ತಿಳಿಯುತ್ತಿದ್ದ. ಶೋಧನಾಲಯ ಬಿಟ್ಟುಮಾತ್ರ ಹೊರಗೆ ಬರುತ್ತಿರಲಿಲ್ಲ.

ಬಗೆಬಗೆಯ ಆನಂದಕೂಟಗಳು ಸೈನಿಕರಿಗೆ ನೀಲಗಿರಿಯಲ್ಲಿ ಆಗ ನಡೆಯುತ್ತಿದ್ದವು. ಕಣ್ಣು, ಮನವನ್ನು ಆಕರ್ಷಿಸಿ, ಮನಸೆಳೆಯುವಂತಹ ಶುಭೋದಯ ದಿನವೂ ನೀಲಗಿರಿಯಲ್ಲಿ ಗೊತ್ತಾದವು. ಅಖಂಡವಾಗಿ ಬೆಳೆದ ನಾನಾ ಹೂರಾಶಿಗಳನ್ನು ಏಕ ಕಾಲದಲ್ಲಿ ಒಟ್ಟುಗೂಡಿಸುವ, ಪುಷ್ಪಫಲದರ್ಶನದ ದಿನವು ಗೊತ್ತಾಯಿತು. ಯುರೋಪಿನ ಯುದ್ಧ ಮುಗಿದುಹೋಗಿ, ಜಯವು ಕೈಗೂಡಿ ಬಂದುದು ಪುಷ್ಪಫಲದರ್ಶನಕ್ಕೆ ಹುರುಪುಕೊಟ್ಟಿತು. 'ಗ್ಲೇವ್ಯೂ' ಸೌಧದಲ್ಲಿ ಎಡೆಬಿಡದೆ ಬೆಳೆಸಿತಂದ ಹೂಗಿಡಗಳ ಮಾದರಿಗೆ, ಸುವರ್ಣಸಂಧಿ ಒದಗಿತು. ಒಟ್ಟಿನಲ್ಲಿ ಹೇಳುವುದಾದರೆ 'ಗ್ಲೇವ್ಯೂ'ಲ್ಲಿ ಬೆಳೆದುನಿಂತ ಹೂ ರಾಶಿಯ ಮಾದರಿ ಎಲ್ಲಿಯೂ ಬೆಳೆದಿರಲಿಲ್ಲ. ಎಲ್ಲ ತೋಟಗಾರರು 'ಗ್ಲೇವ್ಯೂ' ಭವನದ ಬೆಳೆಸಿಗೆ, ಉಜ್ವಲ ಭವಿಷ್ಯವಿದೆಯೆಂದುಕೊಂಡು ; ಅಸೂಯೆ ಪಡುತ್ತಿದ್ದರು.

ಶೈಲಾ ಬೆಳೆಸಿದುದನ್ನು, ಪ್ರದರ್ಶನಕ್ಕೆ ಒಯ್ಯುವುದಾದರೆ ಬಹುಮಾನ ಸಿಗುವುದು ಖಂಡಿತ. ಅಧಿಕ ಲಾಭಸಂಪಾದನೆಯಾಗುವುದು ನಿಶ್ಚಯ, ಎಂದು ಸೋಮಯ್ಯ ಆಶೆ ಬೆಳೆಸಿದ. ಆಶೆ ಮುಂದುವರಿದಂತೆ ಅವನ ಮುಖವು ಗಂಭೀರವಾಗುತ್ತ ಬಂದಿತು. ಪ್ರಯೋಗಶಾಲೆ, ಹೂತೋಟ, ಶೈಲನ ವಿಶ್ರಾಂತಸ್ಥಾನ, ಎಲ್ಲವೂ ಅವನ ಸ್ವತಃ ಆಡಳಿತಕ್ಕೆ ಸೇರಿದೆ. ಅಲ್ಲಿ ಪ್ರವೇಶಿಸುವುದಕ್ಕೆ ನನಗೆ ಅವಕಾಶವಿಲ್ಲ. ನನ್ನ ಯೋಜನೆಗೆ ಶೈಲನ ಅನುಮತಿ ಸಿಕ್ಕದು, ಹೀಗಿರುವಾಗ ಲಾಭಸಂಪಾದನೆ, ಬಹುಮಾನ ಪಡೆಯುವಿಕೆ ಹೇಗಾಗುವುದು ? ಸೌಧಕ್ಕೆ ಬಂದಿಳಿದಿರುವವರು ಶೈಲನ ವಿಚಾರದಲ್ಲಿ ಪ್ರವೇಶಿಸುವ ಹಾಗಿಲ್ಲ, ಅಧಿಕಾರಿಯಿಂದ ಅನುಮತಿಯೂ ಸಿಕ್ಕಲಾರದು. ಎಲ್ಲವೂ ನನಗೆ ಅಡ್ಡಿಯಾಗಿದೆ, ಎಂದು ತನ್ನನ್ನು ತಾನೇ ಶಪಿಸಿಕೊಂಡ.

ದೊರೆತ ಸೌಭಾಗ್ಯ ಸನ್ನಿವೇಶದಲ್ಲಿ, ಯಾರ ಬೆಂಬಲವೂ ದೊರೆಯುವ ಹಾಗಿಲ್ಲವಲ್ಲಾ ! ಎಂದು ಚಿಂತಿಸಿದ. ಅವನ ಯುಕ್ತಿಯೆಲ್ಲವೂ ಮಣ್ಣು ಪಾಲಾ

ದಂತೆ ಕಂಡವು. ಯಾರ ನೆರವೂ ಸೋಮಯ್ಯನಿಗೆ ಸಿಕ್ಕದ ಕಾಲದಲ್ಲಿ, ಅಕ್ಕ ಪಕ್ಕದ ತೋಟಗಾರರ ಸಹಾಯ ಸಲಹೆ ನೊರೆಯಿತು. ಸೋಮಯ್ಯ ಏನು ಯೋಚಿಸಿದರೂ, ಬೆಳೆದವುಗಳನ್ನು ಅಪಹರಿಸುವಕಾರ್ಯಕ್ಕೆ ಹೋಗಲಿಚ್ಛಿಸಲಿಲ್ಲ. ಹಿಂದೆ ಅಪಹರಿಸಿ, ಅಮೂಲ್ಯವಾದ ಬೆಲೆಯನ್ನು ಅರಿತುದಾಗಿದೆ ಎಂದು ಅವನು, ಆ ಪ್ರಯೋಗವನ್ನು ಮಾತ್ರ ನಡೆಸಲಿಲ್ಲ.

'ಶೈಲ ಬೆಳೆಯುತ್ತಿರುವುದು, ಪ್ರಯೋಗ ನಡಿಸುತ್ತಿರುವುದು ಶಾಶ್ವತವಾದ ಒಂದು ದೃಷ್ಟಿಗೋಸ್ಕರವಾಗಿ. ಅವನು ಆನಂದಕ್ಕಾಗಿ ಮಾಡುತ್ತಿರುವನೇ ಹೊರತು, ಜನರು ನೋಡಲಿ, ಮೆಚ್ಚಿ ತಲೆದೂಗಲಿ, ಎಂದು ಬೆಳೆಯುತ್ತಿಲ್ಲ, ಬೆಳೆದ ಹೂಗಿಡಗಳು ಪ್ರದರ್ಶನಕ್ಕೆ ಬಾರದೆ ದೂರವಾಗಿದ್ದಲ್ಲಿ, 'ಗ್ಲೆನ್ವ್ಯೂ' ಭವನದ ಹಿರಿಮೆ ಹೇಗೆ ಬೆಳಕಿಗೆ ಬರುವುದು?' ಎಂದು ನ್ಯಾಯವಾದ ಸಲಹೆಯನ್ನು ಇತರ ತೋಟಗಾರರು ಸೋಮಯ್ಯನಿಗೆ ಹೇಳಿದರು

ಸೋಮಯ್ಯ ಆದಾಯ, ಯಶಸ್ಸು, ಕೂಡಿಬರುವ ಸುಸಂಧಿಯನ್ನು ತನ್ನಲ್ಲಿಯೇ ಅಡಗಿಸಿ ತೋಟಗಾರರ ಸಲಹೆಯನ್ನೇ ಮುಂದಿಟ್ಟುಕೊಂಡು ಸಮಯ ನೋಡುತ್ತಿದ್ದ. ಸಲಹೆಯನ್ನು ಕೊಟ್ಟ ತೋಟಗಾರರು ದೂರವಾದ ಮೇಲೆ, ಸೋಮಯ್ಯ 'ಅವರು ಹೇಳುವುದನ್ನು ಕೇಳಿ ಅನುಕೂಲ ಪಡೆದುದಾಯಿತು, ಈಗ ಕಾರ್ಯ ನಡಿಸುವ ಬಗೆಯು ಮಾತ್ರ ತಿಳಿಯದಾಗಿದೆ' ಎಂದುಕೊಂಡ. ಪ್ರದರ್ಶನದ ದಿನಗಳು ತೀರ ಹತ್ತಿರಕ್ಕೆ ಬರುತ್ತಿದ್ದವು. ಶೈಲನ ದುಡಿತದಿಂದ, ಪ್ರಯೋಜನ ಹೊಂದುವ ದೂರದಾಸೆಯಲ್ಲಿಯೇ ಸೋಮಯ್ಯನಿರುತ್ತಿದ್ದ.

ಒಂದು ಸಂಜೆ, ಶೈಲ 'ಗ್ಲೆನ್ವ್ಯೂ' ಯಿಂದ ದೂರ ಪ್ರದೇಶಕ್ಕೆ ಹೊರಟ. ಬಂಡೆಯನ್ನೇರಿ ದೂರದ ಸರೋವರವನ್ನು ನೋಡುತ್ತ ಕುಳಿತ. ಹೊತ್ತು ಮೀರಿತ್ತು. ತಪ್ಪುಒಪ್ಪಿನ ವಿಚಾರ, ಅದರಿಂದಾಗುವ ಪರಿಣಾಮವನ್ನು ಪರ್ಯಾಲೋಚಿಸುತ್ತಿದ್ದ. ಶೋಧಿಸಿದ ಜ್ಞಾನದ ಉಪಯುಕ್ತತೆ, ಬಹಳ ಕಾಲದ ಮೇಲೆ ಬೆಳಕಿಗೆ ಬರುತ್ತದೆ. ಈ ಯುದ್ಧಕಾಲದಲ್ಲಿ ಎಲ್ಲರೂ ದುರಾಶೆಗೆ ಬಲಿಯಾಗುತ್ತಿದ್ದಾರೆ. ಎಲ್ಲರೂ ಸುಖವನ್ನು ಕೋರುವ ಸಾಹಸ ಮಾಡಬಾರದೇ ಎಂದು, ಬಹಳ ಹೊತ್ತಿನವರೆವಿಗೂ ಯೋಚಿಸಿದ. ಕತ್ತಲು ಕವಿದು ಸುತ್ತೆಲ್ಲ ಆವರಿಸಿದಾಗ, ಬಂಡೆಯಿಂದಿಳಿದು ಹೊರಡಲು ಸಿದ್ಧನಾದ. ಯೋಚನೆಯ

ಪೋಷಣೆಯಲ್ಲಿದ್ದವನಿಗೆ, ಕತ್ತಲಲ್ಲಿ ದಾರಿ ಹುಡುಕಿ ಹೋಗುವ ಪ್ರಸಂಗ ಬಿತ್ತು. ಅವನು ತಾನು ಕುಳಿತಿದ್ದ ಬಂಡೆಯನ್ನೇ ಮರೆತು, ಬಂಡೆಯಿಳಿದು ಬರುವ ಬದಲು ಎದ್ದು ಬಿದ್ದು ಹೋಗುತ್ತಿದ್ದ. ಚಳಿಯೂ ತನ್ನ ಪ್ರಮಾಣ ಮೀರಿತ್ತು. ಅಂಧಕಾರದಲ್ಲಿದ್ದ ಶೈಲನ ಲಕ್ಷ್ಯವೆಲ್ಲಿಯೋ ಇದ್ದು, ಅವನ ಜಾರಿನ ಕಡೆಗೆ ಕಾಲಿಟ್ಟ. ಆಳವಾದ ಬಂಡೆಯ ಮೇಲೆ ಕಾಲಿಟ್ಟು ಜಾರಿದ. ದಾಯತಪ್ಪಿ ಎತ್ತರವಾದ ಜಾಗದಿಂದ ತಗ್ಗಿನ ಪ್ರದೇಶಕ್ಕೆ ಹೊರಳಿಬಿದ್ದ.

ಹಣೆಗೆ ಬಲವಾದ ಪೆಟ್ಟು ತಾಕಿತ್ತು. 'ಗ್ಲೇವ್ಯೂ' ಅಲ್ಲಿ ಭಯಂಕರವಾದ ಭೂಕಂಪ ನಡೆದುಹೋದ ಹಾಗಾಯಿತು. ಏನೋ ಘಾತ ನಡೆದುಹೋಗಿದೆಯೆಂದು ತೋಟದ ಎಲ್ಲಾ ಆಳುಗಳು ಓಡುತ್ತ ಬಂದರು. ಉರುಳಿಬಿದ್ದ ಶೈಲ, ಜಲವಸತಿಯ ಹತ್ತಿರದಲ್ಲಿ ಜ್ಞಾನಶೂನ್ಯನಾಗಿ ಬಿದ್ದುಬಿಟ್ಟಿದ್ದ. ಕಣ್ಣಿನ ಮೇಲೆ ಬಲವಾದ ಗಾಯವಾಗಿ ರಕ್ತ ಹರಿಯುತ್ತಿತ್ತು. ರಕ್ತಸ್ರಾವ ನಿಲ್ಲಿಸಲು ಯಾರಿಂದಲೂ ಸಾಧ್ಯವಾಗಲಿಲ್ಲ ವೈದ್ಯಶಾಲೆಗೆ ಶೈಲನನ್ನು ಸಾಗಿಸುವುದೊಂದೇ ಉಪಾಯವೆಂದು ಆಳುಗಳು, ತಮ್ಮೊಳಗೆ ಗೊತ್ತುಮಾಡಿಕೊಂಡರು. ಸೋಮಯ್ಯ 'ಗ್ಲೇವ್ಯೂ' ಭವನದಿಂದ ಸುದ್ದಿ ತಿಳಿದು ಓಡಿಬಂದ.

ತೋಟದಾಳುಗಳ ಸಹಾಯದಿಂದ ಶೈಲ, ಸೆಂಟ್ ಬಾರ್ಥಲೋಮಿಯೋ ವೈದ್ಯಶಾಲೆಗೆ ಬಂದ. ಜ್ಞಾನಶೂನ್ಯನಾಗಿದ್ದವನನ್ನು ಸಾಗಿಸುವುದರಲ್ಲಿ ಸೋಮಯ್ಯ ಹಿರಿಯಾಳಾಗಿದ್ದ. ಆಳುಗಳು ಶೈಲನ ಸ್ಥಿತಿಯನ್ನು ಕಂಡು ಮರುಗಿದರು. ಆಕಸ್ಮಿಕವಾಗಿ ಘಟನೆ ನಡೆದು ಹೋಗಿ, ವಿಪರೀತಾವಸ್ಥೆಗೆ ಬಂದಿದೆಯೆಂದು ಪರಿತಾಪಪಟ್ಟರು. 'ಅವನಿಗೆ ರಕ್ತಸ್ರಾವವಾಗಿ, ನಿತ್ರಾಣವಾಗಿದೆ. ಸ್ಮೃತಿ ಬರುವುದು ನಿಧಾನವಾಗಬಹುದು' ಎಂದು ವೈದ್ಯ ಎಲ್ಲರನ್ನೂ ಕಳುಹಿಕೊಟ್ಟು, ಸೋಮಯ್ಯನನ್ನು ಮಾತ್ರ ನಿಲ್ಲಿಸಿಕೊಂಡ. ಕೆಂಪುಗೊಂಡೆಯ ಟೋಪಿಯೊಂದು ಪೂರ್ಣವಾಗಿ ಶೈಲನ ಶಿರವನ್ನು ಮುಚ್ಚಿತು. ವೈದ್ಯರ ಚಿಕಿತ್ಸೆಯಿಂದ ಶೈಲ ಪ್ರಜ್ಞೆ ತಿಳಿದ. ಕಾಯುತ್ತಿದ್ದ ಸೋಮಯ್ಯ, ಭಯವಿಲ್ಲವೆಂಬ ಸೂಚನೆ ವೈದ್ಯರಿಂದ ಬಂದೊಡನೆಯೇ ಭವನಕ್ಕೆ ಹಿಂದಿರುಗಿದ.

೧೯

ಸೋಮಯ್ಯ ಬರುವುದನ್ನೇ ನಿರೀಕ್ಷಿಸುತ್ತಿದ್ದ ಪ್ರಭಾ, ತೋಟಗಾರನ ಸ್ಥಿತಿಯನ್ನು ಕೇಳಿ ತಿಳಿದಳು. 'ಭಯವೇನೂ ಇಲ್ಲ! ವೈದ್ಯಶಾಲೆಯಿಂದ ಶೀಘ್ರ

ರಿಸಿ, ಹಿಂದಿರುಗಿ ಬರಲು, ಬಹಳ ದಿನ ಹಿಡಿಯುವುದು' ಎಂದು ಸೋಮಯ್ಯ ತಿಳಿಸಿದ. 'ಭಯವೇನೂ ಇಲ್ಲ' ಎಂಬ ಉತ್ತೇಜಕವಾದ ಸುದ್ಧಿ ಪ್ರಭೆಯನ್ನು ಸಮಾಧಾನಗೊಳಿಸಿತು.

'ಅವನು ಹಿಂದಿರುಗಿ ಬರಲು ಬಹಳ ದಿನ ಹಿಡಿಯುವುದು' ಎಂಬ ಸೋಮಯ್ಯನ ನುಡಿಯಲ್ಲಿ ಗೂಢಾರ್ಥವಿತ್ತು. ಸುಲಭವಾಗಿ ಕೆಲಸ ಕೈಗೂಡಿ ಬಂದಿತೆಂದು ಆನಂಪಪಟ್ಟ. ಅವನ ನುಡಿಯಲ್ಲಿ ಮಹದಾನಂದದ ಸಂಗತಿ ಅಡಗಿತ್ತು. ಬಾರ್ಥಲೊಮಿಯೋ ವೈದ್ಯಶಾಲೆಯಿಂದ ಬರುತ್ತಿದ್ದವನು ಪ್ರದರ್ಶನಕ್ಕೆ ಎರಡು ದಿನದ ಅವಕಾಶ ಮಾತ್ರವಿದೆ, ಶೈಲ ದೂರವಾಗಿದ್ದಾನೆ, ನಿರಾಯಾಸವಾಗಿ ಕಾರ್ಯ ನೆರವೇರಿಸಿಕೊಳ್ಳುವ ಯೋಚನೆ ಮಾಡಿದ.

ಬೆಳೆದು ನಿಂತ ಹೂ ರಾಶಿಯನ್ನು ಪ್ರದರ್ಶನಕ್ಕೆ ತೆಗೆದುಕೊಂಡುಹೋಗುವುದು ಎಂದು, ಒದಗಿಬಂದ ಸುಸಂಧಿಗಾಗಿ ಆನಂದಿಸಿದ. ಸೋಮಯ್ಯನ ದುರಭಿಪ್ರಾಯ ಪ್ರಭೆಗೆ ಗೊತ್ತಿರಲಿಲ್ಲ.

ಎರಡನೆಯ ದಿನ ಪ್ರಭಾ ವೈದ್ಯಶಾಲೆಗೆ ಬಂದಳು. ತೋಟಗಾರನನ್ನು ಕಾಣಲು ನಾನು ಮಾಡಿದ ಎರಡು ಸಾರಿಯ ಯತ್ನದಲ್ಲಿ ವಿಫಲಳಾದೆ. ಈಗ ನನಗೆ ಅವನನ್ನು ಕಾಣುವ ಅವಕಾಶ ಸಿಕ್ಕುವುದು ಎಂದು ನೆನೆದಳು. ಆದರೆ, ಪ್ರಯೋಗಶಾಲೆಯಲ್ಲಿ ನೆಮ್ಮದಿಯಿಂದಿರುತ್ತಿದ್ದ ತೋಟಗಾರನನ್ನು ಕಾಣದೆ, ವೈದ್ಯಶಾಲೆಯಲ್ಲಿ ನರಳುತ್ತಿದ್ದವನನ್ನು ಕಾಣಬೇಕಾಯಿತು. ಶೈಲನ ಹಣೆ ಸಿಡಿದು ಹೋಗುವ ಹಾಗೆ ಬಿಸಿಯಾಗಿತ್ತು. ಅವನು ಹೊರಳಾಡುತ್ತಿದ್ದ. ಕರುಣಾಜನಕವಾದ ಸ್ಥಿತಿಗೆ ಮರುಗುತ್ತಿದ್ದ ಪ್ರಭಾ, ಅವನ ಹಣೆಯ ಮೇಲೆ ತನ್ನ ಮೃದುವಾದ ಕೈಯಿರಿಸಿ ನೇವರಿಸಿ ಸಂತವಿಸಿದಳು. ಶೈಲನಿಗೆ, ತನ್ನನ್ನು ಯಾರು ಮಾತನಾಡಿಸುತ್ತಿರುವರೆಂಬ ಗಮನವಿರಲಿಲ್ಲ. ಜ್ವರದ ಮಂಪರದಲ್ಲಿಯೇ ಅವನಿದ್ದ. ವೈದ್ಯಶಾಲೆಯ ಸೇವಕರು ರೋಗಿಯನ್ನು ಹೆಚ್ಚು ಮಾತನಾಡಿಸಕೂಡದೆಂದು ಪ್ರಭೆಯನ್ನು ಎಚ್ಚರಿಸಿ, ದೂರ ಕಳುಹಿಸಿದರು. ಅವಳು ನಿರುಪಾಯಳಾಗಿ ಭವನಕ್ಕೆ ಬಂದಳು.

ಮೂರನೆಯ ದಿನ ರುದ್ರನೊಂದಿಗೆ ಪ್ರಭಾ ವೈದ್ಯಶಾಲೆಗೆ ಬಂದಳು. ಜ್ವರದ ತಾಪ ಕಡಿಮೆಯಾಗಿ ಹೊರಳಾಡುವುದನ್ನು ಅವನು ಕಡಿಮೆ

ಮಾಡಿದ್ದ. ಪ್ರಭೆಯು ತನ್ನನ್ನು ಕಾಣಲು ಬಂದುದನ್ನು ನೋಡಿದ ಶೈಲ, ಸೌಧದ ತರುಣಿಯೇ ವೈದ್ಯಶಾಲೆಯವರೆವಿಗೂ ಬಂದಿರುವಳೆಂದು ತಿಳಿದುಕೊಂಡ.

'ನೀವು ಒಬ್ಬ ಸಾಮಾನ್ಯನನ್ನು ನೋಡಲು ವೈದ್ಯಶಾಲೆಗೆ ಬಂದಿರುವಿರಿ, ನಾನು ನಿಮಗೆ ಋಣಿಯಾಗಿದ್ದೇನೆ' ಎಂದು ಪ್ರಯಾಸದಿಂದ ಮಾತನಾಡಿದ.

ಅವನು ಆಯಾಸ ಪಡಕೂಡದೆಂದು ಪ್ರಭಾ ಸಂಜ್ಞೆ ಮಾಡಿದಳು. ರೋಗಿಗೆ ಹೆಚ್ಚು ತ್ರಾಸ ಕೊಡಲಾಗದೆಂದು ಎಚ್ಚರಿಕೆಯಿಂದಲೇ ಅವಳಿದ್ದಳು.

'ನಿಮ್ಮಿಂದ ಈ ಸಾಮಾನ್ಯನಿಗೆ ಒಂದು ಸಣ್ಣ ಕೆಲಸವಾಗಬೇಕಾಗಿದೆ. ನೀವು ನಡಿಸಿಕೊಡುವ ವಚನಕೊಟ್ಟ್ರದಾದರೆ, ವೈದ್ಯಶಾಲೆಯಲ್ಲಿ ನಾನುನಿಲ್ಲುವೆ, ಇಲ್ಲದಿದ್ದಲ್ಲಿ ನನಗೆ ಚಿಕಿತ್ಸೆಯೇ ಬೇಡ!' ಎಂದ ಶೈಲ.

ಪ್ರಭಾ ದುಂಬಾಲಿಗೆ ಬಿದ್ದಳು. ರೋಗಿಯನ್ನು ಸಂತೈಸುವುದು ಅವಳ ಪ್ರಥಮ ಕರ್ತವ್ಯವಾಗಿದ್ದುದರಿಂದ ಸ್ವಲ್ಪಕಾಲ ಯೋಚಿಸಿದಳು. ವೈದ್ಯಶಾಲೆಯಲ್ಲಿ ಅವನು ಮಾನಶ್ಯಾಂತಿಯಿಂದಿರಬೇಕಾದರೆ, ಒಪ್ಪಿಗೆ ಕೊಡುವುದು ಅವಶ್ಯಕವೆಂದು ತಿಳಿದಳು.

'ನೀವು ಯೋಚಿಸಬಾರದು, ನೆರವೇರಿಸಿಕೊಡುವ ಹೊಣೆ ನನಗಿರಲಿ' ಯೆಂದು ಧೈರ್ಯದಿಂದಲೇ ಶೈಲನಿಗೆ ಸಮಾಧಾನ ಹೇಳಿದಳು.

'ನನಗೆ ಈ ಜೀವ, ಉದ್ಯೋಗ, ಎಲ್ಲವೂ ನೆಪಮಾತ್ರವಾಗಿದೆ. ಒಂದು ವೃತ್ತಿ ಅನುಸರಿಸಲೋಸುಗವಾಗಿ ನಾನು ನಿಂತಿರುವೆ. ಆ ವಿಚಾರವೇ ಬೇರೆ ಇರಲಿ. ನನ್ನ ವಾಸಸ್ಥಾನದಲ್ಲಿ ಒಂದು ಸಣ್ಣ ಪೆಟ್ಟಿಗೆಯಿದೆ. ಅದನ್ನು ನಾನು ಎಲ್ಲಕ್ಕಿಂತಲೂ ಹೆಚ್ಚಾಗಿ ಕಾಪಾಡಿಕೊಂಡು ಬರುತ್ತಿದ್ದೇನೆ. ಆ ಅಮೂಲ್ಯವಾದ ಪೆಟ್ಟಿಗೆಯು, ನಾನು ಪುನಃ 'ಗ್ಲೇವ್ಯೂ'ಸೇರುವವರೆವಿಗೂ ತಮ್ಮ ವಶದಲ್ಲಿರಲೆಂದು ಕೇಳಿಕೊಳ್ಳುತ್ತೇನೆ. ಪೆಟ್ಟಿಗೆ ಕಳುವಾಗುವುದೆಂಬ ಭೀತಿಯಿದೆ, ಎಚ್ಚರಿಕೆ ತೆಗೆದುಕೊಳ್ಳಬೇಕಾಗಿದೆ' ಎಂದ ಶೈಲ.

'ಇಷ್ಟು ಸಣ್ಣ ಕೋರಿಕೆ ನೆರವೇರಿಸಿಕೊಡಲು ಎಷ್ಟು ಕಷ್ಟವಾಗುವುದು? ನಾನು ಭದ್ರಪಡಿಸುವೆ, ನೀವು ವೈದ್ಯಶಾಲೆಯಲ್ಲಿರುವವರೆವಿಗೂ ನಿರ್ಭಯವಾಗಿರಬಹುದು. ಯಾವ ಕಾತುರಕ್ಕೂ ಕಾರಣವಿರುವುದಿಲ್ಲ' ಎಂದು ಪ್ರಭಾ ಶೈಲನಿಗೆ ಹೇಳಿ ಹೊರಬಿದ್ದಳು.

೨೦

ಒಂದು ಸಣ್ಣ ಪೆಟ್ಟಿಗೆಗಾಗಿ ವನಮಾಲಿ ಎಷ್ಟು ಹಂಬಲಿಸುತ್ತಾನೆ? ಪೆಟ್ಟಿಗೆಯು ಅಮೂಲ್ಯವಾದುದೆಂದು ಹೇಳುತ್ತಿದ್ದಾನೆ! ಯಾವ ಜೀವಕ್ಕೆ, ಏನು ಮಹತ್ವಾದ ಕೋರಿಕೆಯಿರುತ್ತದೆಯೋ ಯಾರು ಬಲ್ಲರು? ನಿಜವಾಗಿಯೂ ತೋಟಗಾರನಿಗೆ ಸಂಬಂಧಿಸಿದ ಪ್ರಿಯವಸ್ತುವೊಂದು ಪೆಟ್ಟಿಗೆಯಲ್ಲಿರಬೇಕು. ವೃತ್ತಿ, ಉದ್ಯೋಗವನ್ನು ಪೆಟ್ಟಿಗೆಗಾಗಿ ನಿರಾಕರಿಸಲೂ ಸಿದ್ಧನಾಗಿರುವ ವನಮಾಲಿಯನ್ನು ನೆನೆವರೆ ಆಶ್ಚರ್ಯವಾಗುವುದು. ಅವನು ಪೆಟ್ಟಿಗೆಯನ್ನು, ಭದ್ರವಾಗಿ ಕಾಪಾಡಿಕೊಂಡು ಬರುತ್ತಿರುವೆನೆಂದು ಹೇಳುತ್ತಿದ್ದಾನೆ. ಪೆಟ್ಟಿಗೆಯಲ್ಲಿ ಏನಿರಬಹುದು? ಅಜ್ಞಾತವಾಸಿ, ಮಿತಭಾಷಿಯಾದ ತೋಟಗಾರನಿಗೆ ಹೆಚ್ಚು ಬೆಲೆಬಾಳುವ ವಸ್ತುತಾನೆ ಯಾವುದಿರಬಹುದು? ಅದು ತನ್ನ ಕೈಬಿಟ್ಟುಹೋಗಬಹುದೆಂಬ ಬಲವಾದ ಭೀತಿ ಅವನಿಗಿರುವ ಹಾಗೆ ಕಾಣುತ್ತಿದೆ. ಅದನ್ನು ಕಾಪಾಡಲು ನನ್ನಲ್ಲಿ ಮೊರೆಯಿಡುತ್ತಿದ್ದಾನೆ. ಪೆಟ್ಟಿಗೆಯು ನನ್ನ ವಶಕ್ಕೆ ಸಿಗಲಿ. ಮೊದಲಿನ ಕರ್ತವ್ಯ ಮುಗಿದು ಹೋಗಲಿ, ಮತ್ತೆ ನೋಡುವಾ ಎಂದುಕೊಂಡಳು ಪ್ರಭೆ.

ರುದ್ರನ ಸಹಾಯದಿಂದ ಪ್ರಭಾ, ಶೈಲನ ಬಿಡಾರವನ್ನೆಲ್ಲಾ ಶೋಧನೆ ಮಾಡಿ; ಆಕರ್ಷಣೀಯವಾದ ಸಣ್ಣ ಮುಕಮಲ್ಲಿನ ಪೆಟ್ಟಿಗೆಯನ್ನು ಪಡೆದಳು. ವನಮಾಲಿಯ ಪ್ರಿಯವಸ್ತು ಕೈಸೇರಿತೆಂದು ಹಿಗ್ಗಿಹೋದಳು. ಪೆಟ್ಟಿಗೆ ಭದ್ರವಾಗಿದೆಯೆಂದೂ, ಅದಕ್ಕಾಗಿ ಶೈಲ, ಏನೂ ಚಿಂತಿಸಬಾರದೆಂದೂ ಅವಳು ರುದ್ರನೊಡನೆ ವೈದ್ಯಶಾಲೆಗೆ ಹೇಳಿಕಳುಹಿಸಿದಳು. ಅಲ್ಲದೆ, ತೋಟಗಾರನ ಇತರ ಯಾವ ವಸ್ತುವೂ ಮಾಯವಾಗದಂತೆ, ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿರುವಂತೆ, ರುದ್ರನನ್ನು ನಿಯಮಿಸಿದಳು.

'ಗ್ಲೆನ್‌ವ್ಯೂ' ನಿಶ್ಚಲ, ನಿರ್ಭಯವಾದ ಕೋಣೆಯೊಂದರಲ್ಲಿ, ಶೈಲನ ಪ್ರಿಯವಸ್ತುವನ್ನು, ಪ್ರಭಾ ಅಡಗಿಸಿಟ್ಟಳು. ಮತ್ತೆ, ಗೂಢವಾದ ವಿಷಯ ಅವಳನ್ನು ಬಾಧಿಸಲಾರಂಭಿಸಿತು. ಸರ್ವತ್ಯಾಗ ಮಾಡಲು ಸಿದ್ಧನಾಗಿರುವ ತೋಟಗಾರನ ಪೆಟ್ಟಿಗೆಯಲ್ಲಿ ಏನಿರಬಹುದೆಂಬ ಕುತೂಹಲ ಅವಳನ್ನು ಕಾಡಿತು. ಅಂದವಾದ ಪೆಟ್ಟಿಗೆಯನ್ನು ಒಮ್ಮೆ ತಿರುಗಿಸಿ ನೋಡಿದಳು. ಅದಕ್ಕೆ, ಮುದ್ರೆ ಅಥವಾ ಬಂಧನ ಯಾವುದೂ ಇರಲಿಲ್ಲ. ಸುಲಭವಾಗಿ ಯಾರಾದರೂ ಅದನ್ನು ತೆಗೆದು

ಅಡಗಿರುವುದನ್ನು ಕಾಣಬಹುದಾಗಿತ್ತು. ಹೀಗಿರುವಾಗ, ಪ್ರಭೆಯೂ ಮುಂದು ವರಿದಳು.

ಮಕಮಲ್ಲಿನ ಪೆಟ್ಟಿಗೆಯನ್ನು ತೆಗೆದುನೋಡಿದ ಪ್ರಭಾ, ಅದರಲ್ಲಿ, ಕಣ್ಣು ಕೊರೈಸುವ ಹಾಗೆ ಇದ್ದ ವಜ್ರಹಾರವನ್ನು ಕಂಡಳು. ಆ ಪೆಟ್ಟಿಗೆ, ಶೈಲ ರಂಗೂ ನಿನಿಂದ ಹೊರಟುಬರುವಾಗ, ಹೇಮಂತರು ಕೊಟ್ಟ ಆಭರಣದ ಪೆಟ್ಟಿಗೆಯೇ ಆಗಿತ್ತು.

ಹಾರದ ಬಣ್ಣ ಕುಂದಿರಲಿಲ್ಲ. 'ಇಂತಹ ಹಾರವೊಂದನ್ನು ನಾನು ಒಮ್ಮೆ ಬಯಸಿ, ಮಾಡಿಸಿಕೊಡುವಂತೆ ಒತ್ತಾಯ ಪಡಿಸಿದ್ದೆ. ಹಾರದ ತಯಾರಿಕೆಗೆ ತಂದೆಯವರು ಒಪ್ಪಿಗೆ ಕೊಟ್ಟಿದ್ದರು. ಮುಂದೆ ಏನಾಯಿತು? ನಾನು ಕಟಕ್ ನಗರದಲ್ಲಿ ನಿಂತುಬಿಟ್ಟೆ. ಅವರು ರಂಗೂನಿನಲ್ಲಿಯೇ ಉಳಿದರು. ಹಾರದ ಕೋರಿಕೆ, ಅಷ್ಟಕ್ಕೆ ಕಡಿದುಬಿತ್ತು' ಎಂದು ಪ್ರಭಾ ಮನದಲ್ಲಿಯೇ ನೆನೆದು ದುಃಖಿಸಿದಳು.

ಒಂದುಸಾರಿ ತಂದೆಯ ಹಸ್ತಾಕ್ಷರ ಕಂಡು ಚಿಂತೆಮಾಡಿ, ಅಸಮಾಧಾನ ಪಟ್ಟವಳು; ವಜ್ರಹಾರವನ್ನು ನೋಡಿ ಮತ್ತೆ ದುಃಖಿಸಿದಳು.

ನೆನೆದಷ್ಟು ದುಃಖ ಅತಿಯಾಯಿತು. ಚೌಧುರಿಯವರಿಗೂ ಆಕೆಯ ದುಃಖ ಮಿತಿ ಮುಟ್ಟಿತು 'ಎಷ್ಟು ಚಿಂತಿಸಿ, ಮಾಡಬಹುದಾದರೂ ಏನು? ಪ್ರಭಾ! ಇವೆಲ್ಲವೂ ಹೇಮಂತರನ್ನು ಕಾಣುವ ಸೂಚನೆಯೆಂದು ನಾವು ತಿಳಿದು ಕಾಲ ತಳ್ಳಬೇಕು. ನೆಮ್ಮದಿಯಿಂದಿರು!' ಎಂದು ಅವರು ಪ್ರಭೆಯ ದುಃಖವನ್ನು ಕಡಿಮೆಮಾಡಲು ಯತ್ನಿಸಿದರು.

ವಜ್ರಹಾರ ಪುನಃ ಪೆಟ್ಟಿಗೆ ಸೇರಿತು. ಶೈಲ, ಸೆಂಟ್ ಬಾರ್ಥಲೋಮಿಯೊ ವೈದ್ಯಶಾಲೆಯಿಂದ 'ಗ್ಲೆನ್‌ವ್ಯೂ' ಗೆ ಬರುವುದನ್ನೇ ಚೌಧುರಿಯವರು ಕಾಯುತ್ತಿದ್ದರು. ಪ್ರಭೆಗೆ ತಾಳ್ಮೆಯಿರಲಿಲ್ಲ. ತೋಟಗಾರನನ್ನು ಕಂಡು, ಹೆಚ್ಚಿನ ವಿಷಯವನ್ನು ತಿಳಿಯಬೇಕೆಂದಿದ್ದವಳಿಗೆ ಅವಕಾಶ ದೊರೆಯಿತು. ಹೆಚ್ಚಿನ ಭಾರ ನಾನು ಹೊತ್ತಿದ್ದೇನೆ, ಮುಂಚಿತವಾಗಿಯೇ ವಿವರವನ್ನು ತೋಟಗಾರನಿಂದ ಕೇಳಿ ತಿಳಿಯುವಾ ಎಂದು ನಡೆದಳು.

ಪ್ರದರ್ಶನ ನೋಡಲು, ಅನೇಕರು ಬರುವರು, ಯೋಗ್ಯವಾದುದನ್ನು ಕೊಳ್ಳಲು ಬರುವವರು ಎಂದು, ಸೋಮಯ್ಯ ಎಣಿಸಿದ. ವರ್ಷವರ್ಷವೂ ಪ್ಲಾದ

ರ್ಶನ ನಡಿಯುತ್ತಲೇ ಇರುತ್ತದೆ. ನಾನೂ ಅನೇಕ ಬಾರಿ ಹೂವು ಹಣ್ಣುಗಳನ್ನು ಪ್ರದರ್ಶನಕ್ಕೆ, ತೆಗೆದುಕೊಂಡು ಹೋಗಿ ಬಂದಿದ್ದೇನೆ. ಮಹತ್ವವಿಷಯವೇನೂ ಕಾಣಲಿಲ್ಲ. ಆದರೆ, ಈ ಶ್ರೇಷ್ಠತರಹದ ಹೂವನ್ನು ನಾನು ಎಂದೂ ನೋಡಿಲ್ಲ, ಪ್ರದರ್ಶನಕ್ಕೆ, ತೆಗೆದೂ ಹೋಗಿಲ್ಲ. ಅಸಾಮಾನ್ಯ ತೋಟಗಾರ ಶೈಲ, ಬೆಳೆದುದೆಲ್ಲವೂ ನನ್ನ ಕೈಸೇರಿದೆ. ಬಹುಮಾನ ದೊರೆಯುವುದು ಖಚಿತವೆಂದು ಮನಸ್ಸು ನುಡಿಯುತ್ತಿದೆ ಎಂದು, ಭಾವನೆ ಮಾಡಿಕೊಂಡ.

ಶೈಲ ಹೂವನ್ನು ಮಾತ್ರ ಬೆಳೆಸಿದ್ದ. ಅವುಗಳ ವಿವರಣೆ ಮತ್ತು ಹೆಸರನ್ನು ಬರೆದು ಹೂಕುಂಡಗಳಿಗೆ ಅಂಟಿಸಿರಲಿಲ್ಲ. ಮಹತ್ತಾದ ಫಲಿತಾಂಶ, ಅಧಿಕ ಸಂಪಾದನೆ, ಆಳವಾದ ಆಲೋಚನೆಗೆ ಸೋಮಯ್ಯ ಮನಸ್ಸು ಕೊಟ್ಟಹಾಗೆ ; ಶೈಲ ಕೊಟ್ಟಿರಲಿಲ್ಲ.

ಸೋಮಯ್ಯ, ಪ್ರಭೆಯ ನೆರವಿನಿಂದ ಹೂಕುಂಡಗಳಿಗೆ ಹೆಸರು ಚೀಟಿಯನ್ನು ಬರೆಸಿ, ಅಂಟಿಸುವ ಕೆಲಸವನ್ನು ಸುಲಭದಲ್ಲಿಯೇ ಮುಗಿಸಿದ. ಒಟ್ಟು ಪ್ರದರ್ಶನದಲ್ಲಿ ಉಜ್ವಲವರ್ಣದ 'ಕಾರೋನೇರ್ಷ,' 'ಪೆರಿನಿಯಲ್ಸ' ಮುಂತಾದ ಹೂಕುಂಡಗಳಿಗೆ ಶೈಲೇಂದ್ರದತ್ತನ ಹೆಸರು ಪ್ರಭೆಯಿಂದ ಸೇರಿಸಲ್ಪಟ್ಟಿತು. ಎಲ್ಲಾ ಬಗೆಯ ಸಾಹಸ ಮುಗಿಸಿದನಂತರ, ಸೋಮಯ್ಯ 'ಸಿಮ್ಸ್ ಪಾರ್ಕಿಗೆ' ಹೂಕುಂಡಗಳನ್ನು ಸಾಗಿಸಿದ.

'ಕಾರೋನೇರ್ಷ,' 'ಪೆರಿನಿಯಲ್ಸ' ಮಾದರಿಯ ರೋಜಾ ಹೂಗಳು ನೀಲಗಿರಿಯಲ್ಲಿ ಯಾರೂ ಅಷ್ಟು ರಮ್ಯವಾಗಿ ಬೆಳೆದಿರಲಿಲ್ಲ. ಅಲ್ಲಿಯ ತೋಟಗಾರರು ಅಮೇರಿಕಾ, ಆಸ್ಟ್ರೇಲಿಯಾ, ದಕ್ಷಿಣ ಆಫ್ರಿಕ, ಪೂರ್ವ ಇಂಡಿಯಾ, ಮಾದರಿಯಂತೆ ಬೆಳೆಸಿ, ತೃಪ್ತಿಹೊಂದಿದ್ದರು. ಅವರೂ ಇತರರು ಪ್ರದರ್ಶನಕ್ಕೆ, ತಂದಹಾಗೆ, ತಾವು ಬೆಳೆದುದನ್ನು ತಂದಿದ್ದರು.

'ಸಿಮ್ಸ್‌ಪಾರ್ಕ್' ನೈದಿಲೆಯ ಹೊಂಡದ ಬಳಿ ಪ್ರದರ್ಶನ ತೆರೆಯಲಾಯಿತು. ಹೂದೋಟದ ಪಾಲನೆಯಲ್ಲಿ, ನೀಲಗಿರಿ ಮುಖ್ಯವಾದ ಸ್ಥಳ ; ಹೀಗಿರುವಾಗ ಪ್ರಮೋದವನದ ಪ್ರಕೃತಿಯಲ್ಲಿ ಬೆಳೆದವುಗಳನ್ನು ನೋಡಲು ಹೆಚ್ಚು ಜನರು ಸೇರಿದರು. ಹೊಂಡದ ಬಳಿ ಕಂಗೊಳಿಸಿ ನಿಂತಿದ್ದ ರಂಗು ರಂಗಿನ ಹೂವು, ಮನೆಗಳ ಸಾಲು, ನೋಡಲು ಚಿತ್ತಾಕರ್ಷವಾಗಿದ್ದವು.

ವನಮಾಲಿ, ವನಶ್ರೀ, ಬೆಳೆದು ಅಭಿವೃದ್ಧಿಗೊಳಿಸಿದ ತೋಟಕ್ಕೆ, ಪ್ರಭಾ, ಹೊರಟಳು. ಸೋಮಯ್ಯ, 'ಸಿಪರ್ಸ್ಸ್ಪಾರ್ಕ್' ಹಾದಿ ಹಿಡಿದು ದೂರವಾಗಿದ್ದ. ಶೈಲನಿಂದ ತಂದೆಯವರ ನೆಲೆಯು, ಕ್ಷೇಮ ಸಂಗತಿಯು, ಹೊರಬೀಳುವದೆಂಬ ಅತಿ ಆನಂದದಲ್ಲಿದ್ದ ಪ್ರಭಾ, ತನಗೆ ಸಿಕ್ಕಿದ ತಂದೆಯವರ ಹಸ್ತಾಕ್ಷರ ಉಳ್ಳ ಲೋಕಗೀತೆಗಳ ಸಂಗ್ರಹ, ವಜ್ರಹಾರ ಮೊದಲಾದುವನ್ನು ಚೌಧುರಿಯವರಿಗೆ ತಿಳಿಸಲು ಆತುರದಿಂದ ಭವನಕ್ಕೆ ಓಡಿಬಂದಳು. ಪ್ರಭಾ ನಡೆಸಿದ ಶೋಧನೆ, ಶೋಧನೆಯಿಂದ ದೊರೆತ ಫಲಗಳು, ಚೌಧುರಿಯವರಿಗೆ ತಿಳಿಯಿತು. ಅವರೂ ಆಕೆಯು ನಡೆಸಿದ ಸಾಹಸಕ್ಕೆ ತಲೆದೂಗಿದರು.

೨೧

ಶೈಲ, ವೈದ್ಯಶಾಲೆಯನ್ನು ಬಿಟ್ಟು 'ಗ್ಲೆನ್‌ವ್ಯೂ' ವಿಗೆ ಬಂದಿರಲಿಲ್ಲ. ತೋಟದಲ್ಲಿ ಸುತ್ತಾಡುವುದನ್ನು ಪ್ರಭಾ ಬಿಟ್ಟಿರಲಿಲ್ಲ. ಒಂದು ಕಾರಣಕ್ಕಾಗಿ ಹೂಕುಂಡಗಳನ್ನು ವಿಂಗಡಿಸಿ, ಚೀಟಿಯನ್ನು ಅಂಟಿಸಿ ಇಡುತ್ತಿದ್ದ ಸೋಮಯ್ಯನನ್ನು ಮಾತ್ರ ಪ್ರಭೆ ಕಂಡಿದ್ದಳು. ತೋಟದಲ್ಲಿ, ಪ್ರಯೋಗಶಾಲೆಯಲ್ಲಿ ಅನೇಕ ಹೂಕುಂಡಗಳ ಜಾಗ ಖಾಲಿಯಾಗಿದ್ದುದನ್ನು ನೋಡಿ, ಸೋಮಯ್ಯನನ್ನು ಪ್ರಶ್ನೆಮಾಡಿದಳು.

'ಹೂಕುಂಡಗಳನ್ನು ಎಲ್ಲಿಗೆ ತೆಗೆದುಕೊಂಡು ಹೋಗುತ್ತಿದ್ದೀಯೆ' ನನಗೆ ಪ್ರಭಾ, ಅಡ್ಡಿಯಾದಾಳು, ಕೆಲಸಕ್ಕೆ, ಯೋಜನೆಗೆ, ಪ್ರತಿಬಂಧಕ ತಂದಾಳು ಎಂಬ ಅಳುಕಿನಿಂದಲೇ ಸೋಮಯ್ಯ, 'ಪುಷ್ಪ ಪ್ರದರ್ಶನಕ್ಕಾಗಿ ತೆಗೆದುಕೊಂಡು ಹೋಗುತ್ತಿರುವೆ, 'ಗ್ಲೆನ್‌ವ್ಯೂ' ಮಾದರಿಯ ಹೂಗಳು ಈ ಸಾರಿ ಪ್ರದರ್ಶನಕ್ಕೆ ಎಲ್ಲಿಂದಲೂ ಬರಲಾರದು ; ಜನರ ಮೆಚ್ಚುಗೆ ಪಡೆಯಲೆಂದು.................... ಸಾಗಿಸುತ್ತಿರುವೆ' ಎಂದು ತಿಳಿಸಿದ.

ಸೋಮಯ್ಯನ ಈ ಸಾಹಸಕ್ಕೆ ಪ್ರಭೆ ಅಡ್ಡಿಬರಲಿಲ್ಲ. ನನಗೆ ಪ್ರೋತ್ಸಾಹ ದೊರೆಕಿತು, ಎಂದು ಸೋಮಯ್ಯ ಉಬ್ಬಿಹೋದ. ಮಹತ್ವದ ಮಹದಾಶೆಯಲ್ಲಿ ಮುಳುಗಿ ಹೋದ ಪ್ರಭಾ, ಪ್ರದರ್ಶನದಲ್ಲಿ ವನಮಾಲಿಯ ಯೋಗ್ಯತೆಗೆ ಹೆಚ್ಚು ಫಲ ದೊರೆತುದಾದರೆ ಒಳ್ಳೆಯದು, ಎಂಬ ಸಂತೋಷ ಸಂಭ್ರಮದಿಂದ ಸೋಮಯ್ಯನಿಗೆ ಪ್ರತಿ ಹೇಳಲಿಲ್ಲ.

'ಗ್ಲೇವ್ಯೂ' ವಿನ ಮುಖ್ಯ ತೋಟಗಾರನಾಗಿ ಪ್ರದರ್ಶನದಲ್ಲಿ ಸೋಮಯ್ಯ ಭಾಗವಹಿಸಿದ. ತೋಟಗಾರನಿಗೆ ಒಳ್ಳೆತಾದರೆ ಸಾಕೆಂದು ಬಯಸಿದ್ದ ಪ್ರಭೆಗೆ, ಪುಷ್ಪಪ್ರದರ್ಶನವನ್ನು ನೋಡಲು ಇಚ್ಛೆಯಿರಲಿಲ್ಲ. ಸೋಮಯ್ಯ ಭವ್ಯ ಫಲಿತಾಂಶಕ್ಕೆ, ಎದುರು ನೋಡುತ್ತಾ 'ಸಿಮ್ಸ್‌ಪಾರ್ಕಿ' ನಲ್ಲಿದ್ದಾಗ್ಗೆ, ಪ್ರಭೆ, 'ಗ್ಲೇವ್ಯೂ' ತೋಟದಲ್ಲಿ ವಿಹಾರಿಣಿಯಂತೆ ಸುತ್ತಾಡುತ್ತಿದ್ದು ಕಾಲ ಕಳೆಯುತ್ತಿದ್ದಳು.

ಮದರಾಸು ಪ್ರಾಂತ್ಯದ ಗವರ್ನರ್ ಅವರಿಂದ ಪ್ರದರ್ಶನ ಮೊದಲಾಯಿತು. ಅವರು ಸಸ್ಯ, ಹೂ ಫಲವನ್ನು, ಅಧಿಕಾರಿಗಳೊಂದಿಗೆ ನೋಡುತ್ತ ಬರುತ್ತಿದ್ದರು. ನೀಲಗಿರಿಯ ಸಸ್ಯ ವೈಜ್ಞಾನಿಕ ಸಂಘದವರು ಗವರ್ನರ್‌ಅವರನ್ನು ಅನುಸರಿಸಿ ಬರುತ್ತಿದ್ದರು. ಸಂಘದ ಆಡಳಿತಗಾರರ ಹಿರಿಯ ಕಾರ್ಯದರ್ಶಿ, ಗವರ್ನರ್‌ರೊಂದಿಗೆ 'ಕ್ರಾಫರ್ಡ್' 'ಹೈಮೌಂಟ್,' 'ಉಡ್‌ಕಾಕ್,' 'ವೆಸ್ಟಲೇಕ್' ಮುಂತಾದ ಭವನಗಳಿಂದ ಬಂದು ಸೇರಿದ ನಾನಾ ಸಸ್ಯಜಾತಿಗಳನ್ನು ಪರಿಶೀಲಿಸುತ್ತಾ ನಡೆದ. 'ಸಿಮ್ಸ್‌ಪಾರ್ಕ್' ಹೊರಗಡೆಯ ಭಾಗದಲ್ಲಿ ವೆಲ್ಲಿಂಗ್‌ಟನ್ ಕಡೆಯಿಂದ ಬಂದ ಸೈನ್ಯ ಶಾಖೆಯವರು ಕಾದು ನಿಂತಿದ್ದರು. ಗವರ್ನರ್‌ಅವರ ನಿರ್ಗಮನಕ್ಕಾಗಿ ಅವರು ಅಲ್ಲಿ ನಿಂತಿದ್ದರು. ಪುಷ್ಪಫಲದರ್ಶನದ ಹೆಗ್ಗಳಿಕೆಯ ಪತಾಕೆ ಹಾರುತ್ತಿತ್ತು. ಸೃಷ್ಟಿ ಸಂಭ್ರಮದ ಅರ್ಪಣವನ್ನು ಕಾಣಲು, ಹೊರ ಆವರಣದಲ್ಲಿದ್ದ ಸೈನಿಕ ಸಾರ್ವಜನಿಕರು ಕಾಯುತ್ತಿದ್ದರು.

ಒಮ್ಮುಖವಾಗಿ, ಗವರ್ನರ್‌ಅವರು, ಪ್ರದರ್ಶನದ ಆಡಳಿತಗಾರರು, ಸಸ್ಯವೈಜ್ಞಾನಿಕ ಸಂಘದವರು, 'ಗ್ಲೇವ್ಯೂ' ಹಿರಿಮೆಯ ಹೂ ಸೌಂದರ್ಯವನ್ನು ಮೆಚ್ಚಲು, ಶ್ರೇಷ್ಠ ಬಹುಮಾನ ಅದಕ್ಕೆ, ಕೊಡಲ್ಪಟ್ಟಿತು.

'ಗ್ಲೇವ್ಯೂ' ಹೂರಾಶಿ 'ಡೆಲ್ಫಿನೀಮಸ್', 'ರೆಡ್‌ಕಾರ್ನೇಷನ್,' ಮತ್ತು 'ಬ್ಲೂ ಹಿಮಾಲಯನ್' ಹೂಗಳಿಗೆ ಸಸ್ಯ ವೈಜ್ಞಾನಿಕ ಸಂಘದವರು ವಿಶೇಷ ಬಹುಮಾನವನ್ನು ಪ್ರಶಸ್ತಪತ್ರಿಕೆ ರೂಪದಲ್ಲಿ ಕೊಡಲಿಚ್ಛಿಸಿದರು. ವಿವಿಧ ಬಹುಮಾನ, ಯೋಗ್ಯತಾ ನಿರ್ಣಯದ ಪತ್ರಿಕೆ ಎಲ್ಲಕ್ಕೂ ಹಂಚಲಾಯಿತು. 'ಗ್ಲೇವ್ಯೂ' ಭವನದ ಬೆಳವಣಿಗೆಗೆ ಗವರ್ನರ್‌ಅವರ ಸ್ವರ್ಣಪದಕ ಬಂದಿತು. ಸೋಮಯ್ಯ ಅತ್ಯಾನಂದದಿಂದಲೇ ಬಹುಮಾನ ಸ್ವೀಕರಿಸಿದ.

ಗವರ್ನರ್ ಅವರು 'ಸಿವರ್ಸ್‌ಪಾರ್ಕ್' ಬಿಟ್ಟು ಹೊರಟರು, ಹಾದಿ ಕಾಯುತ್ತಿದ್ದವರು ಪ್ರದರ್ಶನದ ಎಲ್ಲಾ ಭಾಗದಲ್ಲೂ ತುಂಬಿಹೋದರು. ಸ್ವರ್ಣಪದಕ ಸುಲಭವಾಗಿ ಸೋಮಯ್ಯನ ಕೈಸೇರಿದನಂತರ, ಸಸ್ಯ ವೈಜ್ಞಾನಿಕ ಸಂಘದ ಕಾರ್ಯದರ್ಶಿ 'ಗ್ಲೇವ್ಯೂ' ತೋಟಗಾರನನ್ನು ಕರೆಕಳುಹಿದ—

'ಶೈಲೇಂದ್ರದತ್ತನೆಲ್ಲಿ?' ಎಂದು ಪ್ರಶ್ನೆ ಮಾಡಿದ.

'ಅವರು ಪ್ರದರ್ಶನಕ್ಕೆ ಬರಲಿಲ್ಲ, ಬರುವ ಸ್ಥಿತಿಯಲ್ಲಿಲ್ಲ;' ಎಂದು ಸೋಮಯ್ಯ ತಿಳಿಸಿದ.

ಅವರಿಗೆ ವಿಶೇಷ ಯೋಗ್ಯತಾಪತ್ರಿಕೆ ಸಂಘದವರಿಂದ ದೊರೆತಿದೆ. ಆಡ ಳಿತಗಾರರು ಶೈಲೇಂದ್ರದತ್ತರನ್ನು ಕಾಣ ಬಯಸುತ್ತಿರುವುದರಿಂದ, ನೇರವಾಗಿ ಸಂಘದಿಂದಲೇ ಅವರು ಬಹುಮಾನವನ್ನು ಪಡೆಯಬೇಕೆಂದು ಕಾರ್ಯದರ್ಶಿ ಸೋಮಯ್ಯನಿಗೆ ತಿಳಿಸಿದ.

ವೈದ್ಯಶಾಲೆಯಲ್ಲಿ ಚೇತರಿಸಿಕೊಳ್ಳುತ್ತಿದ್ದ ಶೈಲನಿಗೆ, ಪ್ರದರ್ಶನ ನಡೆದುದು, 'ಗ್ಲೇವ್ಯೂ' ತೋಟದಿಂದ ತಾನು ಬೆಳೆಸಿದ ಹೂಗಿಡಗಳು ಪ್ರದರ್ಶನ ಸೇರಿದುದು ಯಾವುದೂ ತಿಳಿದಿರಲಿಲ್ಲ. ಅವನ ಕಣ್ಣಿನ ಮೇಲೆ ಆದ ಗಾಯ ಇನ್ನೂ ಮಾಗಿ ರಲಿಲ್ಲ. ಕಣ್ಣುಗಳೆರಡನ್ನು ಕಟ್ಟಿಬಿಟ್ಟಿದ್ದರು. ಅವನು ಹಾಸಿಗೆಯಲ್ಲಿಯೇ ಮಲಗಿರುತ್ತಿದ್ದ. 'ನನ್ನ ನಿತ್ಯದ ಕೆಲಸವೆಲ್ಲಾ ನಿಂತುಹೋಗಿದೆ. ಏನು ನಡೆ ದಿದೆಯೋ ನಾನು ಕಾಣಲಾರದ ಸ್ಥಿತಿಯಲ್ಲಿರುವೆ' ಎಂದು ಕೊರಗುತ್ತಿದ್ದ. ವೈದ್ಯಶಾಲೆಗೆ, ಶೈಲನನ್ನು ಬಿಟ್ಟು ಹೊರಟುಹೋದ ಸೋಮಯ್ಯ, ಪುನಃ ನೋಡಲು ಬರಲಿಲ್ಲ. ಪ್ರದರ್ಶನದ ತೆಕ್ಕೆಯಲ್ಲಿ ಸೇರಿಹೋಗಿದ್ದವನಿಗೆ, ವಿರಾಮ ವಿರಲಿಲ್ಲ; ಶೈಲನ ನೆನಪೂ ಉಳಿದಿರಲಿಲ್ಲ.

'ಸ್ನೇಹ, ಬಾಂಧವ್ಯ, ಪ್ರೀತಿ ಎಂಬುದನ್ನು ನಾನು ತಿಳಿಯೆನೆಂದು ಜನರು ಆಡಿಕೊಳ್ಳುತ್ತಿರಬಹುದು. ಈ ಸ್ಥಿರಮನುಷ್ಯ, ಮಾತನಾಡುವುದನ್ನೇ ಅರಿಯ್ಯ ನೆಂದು ಅವರು ಭಾವಿಸಿರಬಹುದು. ನನಗೆ ಸ್ಥಿತಿ ಹಾಗೆ ಒದಗಿ ಬಂತು. ಈ ಬಗೆಗೆ ಜನರೇಕೆ ಕಾರಣರಾದಾರು? ಉದಾಸೀನದಲ್ಲಿ ನಾಸಿರಬೇಕಾಯಿತು. ಅದಕ್ಕಾ ಗಿಯೇ ಈ ಅಡ್ಡಿ' ಎಂದು ತನ್ನಲ್ಲಿಯೇ ಶೈಲ, ಸಮಾಧಾನ ತಂದುಕೊಂಡ.

ಸ್ನೇಹಿಗಳ, ಸಹಾಯಕರ ನೆರವು ತನಗಿಲ್ಲವೆಂದೂ, ತಾನೊಬ್ಬ ಕಠೋರ ವ್ಯಕ್ತಿಯೆಂದೂ ಜನರು ತಿಳಿಯುತ್ತಿರುವರೆಂಬ ವಿಚಾರ ಶೈಲನಲ್ಲಿ ಮೂಡಿರುವಾಗ್ಗೆ, ಪ್ರಭಾ, ವೈದ್ಯಶಾಲೆಗೆ ಬಂದಳು.

'ನೀವು ಉತ್ತಮಗೊಳ್ಳುತ್ತಿರುವಿರಿ, ನಾನು ಹಾಗೆ ತಿಳಿಯುತ್ತಿದ್ದೇನೆ;' ಎಂದು ಹೇಳುತ್ತಾ ಶೈಲನನ್ನು ಸಮೀಪಿಸಿದಳು.

ಪ್ರಭೆಗೆ, ಶೈಲನಿಗೆ ಸಿಕ್ಕಿದ ಬಹುಮಾನದ ಸಂಗತಿ ತಿಳಿದಿರಲಿಲ್ಲ. ಶೈಲನನ್ನು ಕಾಣಲು ಮಾತ್ರ ಅವಳು ಬಂದಿದ್ದಳು. ಮಧುರ ಧ್ವನಿಯನ್ನು ಕೇಳಿ ಚಕಿತನಾದ ಶೈಲ 'ಅಲ್ಪನ ವಿಚಾರಕ್ಕೆ, ನೀವು ಇಷ್ಟು ಗಮನಕೊಡುತ್ತಿರುವುದು, ನನಗೆ ಆನಂದವಾಗುತ್ತಿದೆ' ಎಂದ.

ಶೈಲ, ಪ್ರತಿಯಾಗಿ ಪ್ರಭೆಗೆ ನುಡಿದು ಉತ್ತೇಜನ ಕೊಟ್ಟುದುದು, ಒಂದು ವಿಧದಲ್ಲಿ ಒಳ್ಳೆತಾಯಿತು. ಮಾತು ಅವರು ಮುಂದುವರಿಸಿದರು.

'ವಿರಾಮಸ್ಥಾನದಲ್ಲಿ, ನಾನು ಒಂದು ಪುಸ್ತಕ ನೋಡಿದೆ. ಪರಿಚಯದವರ ಹಸ್ತಾಕ್ಷರವನ್ನು ಕಂಡೆ. ಹೆಚ್ಚು ವಿಷಯ ತಿಳಿಯಲು, ನಾನು ಆಶಿಸಿ ಬಂದಿದ್ದೇನೆ' ಎಂದಳು ಪ್ರಭಾ.

ಶೈಲ ನಿಧಾನದಿಂದ 'ನೀವು ಕಂಡ ಹಸ್ತಾಕ್ಷರವೇ ನನ್ನ ಬಾಳನ್ನು ರಕ್ತಾಕ್ಷರದಲ್ಲಿ ಬರೆಯಿತು. ಜೀವನ ಸಮಸ್ಯೆಗೆ ದಾರಿ ತೋರಿತು. ಅದು-ಒಂದು ದೊಡ್ಡ ಕಥೆ, ನೆನೆದರೆ ಘೋರವಾಗುವುದು' ಎಂದು ಮುಗಿಸಿದ.

ದುಃಖಕ್ಕೆ, ನೋವಿಗೆ, ಶೈಲನನ್ನು ದೂಡಲು ಮನಸ್ಸೊಪ್ಪದ ಪ್ರಭಾ, ಮಾತು ಮುಂದುವರಿಸಲಾರದೇ ಹೋದಳು. ಶೈಲ ಘಾಡನಿದ್ರೆಯಲ್ಲಿ ಮೈಮರೆತು ಹೋದ. ಪ್ರಭಾ, 'ಗ್ಲೆವ್ಯೂ' ವಿಗೆ ಹಿಂತಿರುಗಿದಳು.

೨೨

ವೆಲ್ಲಿಂಗ್‌ಟನ್ ಭಾಗದ ಸೈನಿಕನೊಬ್ಬ, ಕೋಮಲವಾದ ಪುಷ್ಪ ಸಮೂಹವನ್ನು ನೋಡುತ್ತ ಬರುತ್ತಿದ್ದ. ಹೂಕುಂಡಗಳನ್ನು, ಕೂಲಂಕಷವಾಗಿ ನೋಡಿ ಬರುತ್ತಿದ್ದವನಿಗೆ ವಿಶೇಷ ಆಸಕ್ತಿಯಿರುವ ಹಾಗೆ ಕಾಣಬರುತ್ತಿತ್ತು. 'ಗ್ಲೆವ್ಯೂ' ಅಲ್ಲಿ ಬೆಳೆದ ರೋಜಾಹೂವಿಗೆ ಸಿಕ್ಕಿದ ಪುರಸ್ಕಾರದ ಮಾತು ಕೇಳಿದವನು, ಅವುಗಳನ್ನು ಕಾಣಲು ಹುಡುಕುತ್ತಿದ್ದ. ಸ್ವರ್ಣಪದಕ ಅವನ ಕಣ್ಣಿಗೆ ಬಿದ್ದಿತು, ಅದರೊಂದಿಗೆ ತೋಟಗಾರ ಶೈಲೇಂದ್ರದತ್ತನ ಹೆಸರು ಅಂಟಿಸಿದುದು ಅವನನ್ನು

ಎಚ್ಚರಿಸಿತು. 'ಶೈಲೇಂದ್ರದತ್ತ ; ಗ್ಲೇವ್ಯೂ!' ಎಂದು ಉಚ್ಚರಿಸಿದ ಸೈನಿಕ 'ಶೈಲ ನೀನಿಲ್ಲಿರುವೆಯಾ' ಎಂದು ಕೂಗಿಕೊಂಡ.

ಸಹಜವಾಗಿ ಸೈನಿಕನ ದೃಷ್ಟಿ, ಸಸ್ಯಜಾತಿಗಳನ್ನು ನೋಡಿಕೊಳ್ಳುತ್ತಿದ್ದ ಸೋಮಯ್ಯನ ಕಡೆಗೆ ಹೊರಳಿತು. ಹಣ್ಣು ಹೂಗಳನ್ನು ಕೊಳ್ಳಲು ಬರುವವರ ಪೈಕಿ, ಸೈನಿಕನೂ ಒಬ್ಬನೆಂದು ಸೋಮಯ್ಯ ನೋಡುತ್ತಿದ್ದ. ವೈಜ್ಞಾನಿಕ ಸಂಘದವರ ಕಡೆಯಿಂದ ಬರುವ ಬಹುಮಾನ ಕೈಸೇರಲಿಲ್ಲವೆಂದು ಅವನು ಚಿಂತೆ ಮಾಡುತ್ತಿದ್ದ.

ಸೈನಿಕ, 'ಶೈಲೇಂದ್ರದತ್ತನೆಲ್ಲಿ?' ಎಂದು ಸೋಮಯ್ಯನನ್ನು ತಿವಿದು ಎಚ್ಚರಿಸಿದ.

ಸೈನಿಕನಿಗೆ ಉತ್ತರ ಹೇಳಲು ತೋಚದೆ, ಸೋಮಯ್ಯ ಹೂಕುಂಡಗಳಿಗೆ ಅಂಟಿಸಿದ ಚೀಟಿಯನ್ನು ನೋಡುವಂತೆ ಸಂಜ್ಞೆಮಾಡಿ, ವ್ಯಾಪಾರದಲ್ಲಿ ತಲ್ಲೀನನಾದ.

ಇವನಿಂದ ಏನೂ ಹೊರಬೀಳದು, 'ಗ್ಲೇವ್ಯೂ'ಗೆ ನೇರವಾಗಿ ಹೋಗಿ ಶೈಲನನ್ನು ಕಾಣಲು ಅವಸರದಿಂದ ಸೈನಿಕ, ಮತ್ತಾವ ವಸ್ತುವನ್ನೂ ನೋಡದೆ ಹೊರಟುಹೋದ.

'ನೇರವಾಗಿ ಅಲ್ಲಿಗೆ ಹೋಗುವುದು, ವಿಚಾರಿಸುವುದು' ಎಂಬ ವಿಚಾರ ತುಂಬಿಕೊಂಡು ಹೋಗುತ್ತಿದ್ದ ಸೈನಿಕ, 'ಗ್ಲೇವ್ಯೂ' ಭವನವನ್ನು ಹುಡುಕುತ್ತಾ ಬಂದ. ಅವನಿಗೆ ಹೂ ರೂಪರಾಶಿ ಅಂದು ಅಷ್ಟು ಹಿಡಿಸಲಿಲ್ಲ. ತೋಟಗಾರನನ್ನು ಕಾಣುವ ಇಚ್ಛೆ ಮಾತ್ರ ಬಹಳವಾಗಿತ್ತು. ಯುದ್ಧ, ವಿಪ್ಲವ ಈ ಕಾಲದಲ್ಲಿ ಯಾರು ಯಾರು ಏನಾಗಿದ್ದಾರೆಯೋ ! ಎಂದು ಸೈನಿಕ 'ಗ್ಲೇವ್ಯೂ' ಸಮೀಪಿಸಿದ.

ಆಗಿನ್ನೂ ಹತ್ತು ಘಂಟೆಯ ಸಮಯ. ಪ್ರಭಾ, ಮುಂಬಾಗಿಲಲ್ಲಿಯೇ ಕುಳಿತಿದ್ದಳು. ವೈದ್ಯಶಾಲೆಗೆ ಹೋಗಿರಲಿಲ್ಲ. ಸೋಮಯ್ಯ ಬರುವುದನ್ನೇ ಕಾಯುತ್ತ ಕುಳಿತಿದ್ದಳು. ನಿರೀಕ್ಷಿಸುತ್ತಿದ್ದ ವೇಳೆಯಲ್ಲಿ, ಸೋಮಯ್ಯನ ಬದಲಾಗಿ ಸೈನಿಕ ಪ್ರವೇಶಿಸಿ ಬಂದ. ಸೈನಿಕನೊಬ್ಬನು ಅತಿಕ್ರಮಿಸಿ ಸೌಧ ಪ್ರವೇಶಿಸಿ ಬಂದಾಗ, ಆಳುಗಳೆಲ್ಲಾ ಅವನನ್ನು ತಡೆಗಟ್ಟಿದರು. ಸೈನಿಕರು, ಲೋಲಾಸಕ್ತರು ; ಮದಾಂಧರು, ಕುಡುಕರು, ಎಂಬ ಕೀಳು ಹೆಸರು ಸಂಪಾದಿಸಿಕೊಂಡು

ದುದು, ಸೈನಿಕನ ಗಮನಕ್ಕೆ ಆಗ ಬಂದಿತು. 'ಈ ಖಾಸಗಿ ಸೌಧದಲ್ಲಿ ನಿನಗೇನು ಕೆಲಸವಿದೆ?' ಎಂದು ಕೆಚ್ಚಿನ ಆಳೊಬ್ಬನು ಸೈನಿಕನನ್ನು ತಡೆಹಾಕಿದ.

'ನನ್ನ ಬಂಧುವೊಬ್ಬ ಇಲ್ಲಿರುವ ; ಕಾಣಲು ಬಂದಿರುವೆ' ಎಂದ ಸೈನಿಕ.

'ನಿನ್ನ ಬಂಧುವಿನ ಹೆಸರೇನು? ಸೌಧದ ಒಡತಿ ಅಪ್ಪಣೆ ಪಡೆಯುವವರೆವಿಗೂ ಮುಂದೆ ಹೋಗಬಾರದೆಂದು' ಆಳು ಸೂಚನೆ ಕೊಟ್ಟ.

'ಶೈಲೇಂದ್ರದತ್ತ, ನನಗೆ ಸಹೋದರ ; ಅವನನ್ನು ಕಾಣಲು ಬಂದಿರುವೆ' ಎಂದ ಸೈನಿಕ.

ಶೈಲನ ಹೆಸರನ್ನು ಕೇಳಿ, ಸಮಾಧಾನ ಹೊಂದಿದ ಆಳುಗಳು ನಡೆದ ವಿಷಯವನ್ನು ಪ್ರಭೆಗೆ ತಿಳಿಸಿದರು.

ಸೈನಿಕ, ಮತ್ತಾರೂ ಅಲ್ಲದೆ ಮಹೇಶನಾಗಿದ್ದ. 'ಗ್ಲೇವ್ಯೂ' ಅಲ್ಲಿ ಅಪ್ಪಣೆಗಾಗಿ ಕಾಯುತ್ತ ನಿಂತಿದ್ದ.

ಸೋಮಯ್ಯ ಸೌಧದಲ್ಲಿಲ್ಲ. ಸೈನಿಕ, ಶೈಲನನ್ನು ಕಾಣಲು ಬಂದಿರುವ. ವಿಚಾರವೇನೆಂದು ತಿಳಿಯುವಾ ಎಂದು ಪ್ರಭಾ, ಸೈನಿಕನನ್ನು ಕರೆ ಕಳುಹಿದಳು. ಸೈನಿಕ, 'ಗ್ಲೇವ್ಯೂ' ಒಳಭಾಗಕ್ಕೆ ಬಂದು ಕುಳಿತ.

'ಸೈನಿಕರು ಕೇಡುಗಾರರೆಂದು, ಸಾಮಾನ್ಯವಾಗಿ ಜನರು ಅಭಿಪ್ರಾಯಪಟ್ಟಿದ್ದಾರೆ, ಬಂಧುವೊಬ್ಬನನ್ನು ಹುಡುಕಿ ಬಂದವರಿಗೆ ಆಳುಗಳಿಂದ ಅಡಚಣೆಯಾಯಿತು' ಎಂದು ಪ್ರಭಾ, ಮಹೇಶನನ್ನು ಬರಮಾಡಿಕೊಂಡಳು.

'ಜನರಲ್ಲಿ ಬಲವಾಗಿ ಊರಿರುವ ಈ ಅಭಿಪ್ರಾಯಕ್ಕೆ ನಾನು ಬದಲಾಗಿ ಏನೂ ಹೇಳಲಾರದವನಾಗಿದ್ದೇನೆ. ಅವರು ಎಲ್ಲರನ್ನೂ ಕೇಡುಗಾರರೆಂದು ಬಗೆದಿದ್ದಾರೆ. ಸೈನಿಕರಲ್ಲಿ ಸರಳರೂ ಸುಸಂಸ್ಕೃತರೂ ಇದ್ದಾರೆ!' ಎಂದು ಸೈನಿಕ ಮಾತು ಮುಂದುವರಿಸಿದ.

'ಶೈಲೇಂದ್ರದತ್ತ, ಭವನದಲ್ಲಿದ್ದಾನೆಂದು ತಿಳಿದು ಇಲ್ಲಿಗೆ ಬಂದೆ. ಅವನನ್ನು, ಕಾಣಲು ಅವಕಾಶ ಕೊಡಬೇಕು' ಎಂದ.

ಖಾಸಗಿ ಅರಮನೆಯಲ್ಲಿ ಶ್ರೀಮಂತ, ತರುಣಿಯೊಂದಿಗೆ ಮಾತನಾಡುತ್ತ ಕುಳಿತವನು, ಶೈಲ ಇಲ್ಲಿಗೇಕೆ ಬಂದ? ಹೇಗೆ ಬಂದ? ಎಂಬ ವಿಚಾರವನ್ನು ಅವನಿಂದಲೇ ತಿಳಿಯಲು ಆತುರ ಪಡುತ್ತಿದ್ದ.

'ನೀವು ಯಾರು? ನಿಮ್ಮ ಹೆಸರೇನು?' ಎಂದು ಕೇಳಿದಳು ಪ್ರಭಾ.

'ನಿನಗೆಷ್ಟು ತಿಳಿದಿದೆಯೋ ನನಗೂ ಅಷ್ಟೇ ತಿಳಿದಿದೆ. ಈಗ ಉಳಿದಿರುವ ಒಂದೇ ಉಪಾಯವೆಂದರೆ ಬರ್ಮ, ಶತ್ರುವಶವಾದ ಮೇಲೆ ಸರ್ಕಾರದ ಶಾಖೆ ಸಿಮ್ಲಾವಿನಲ್ಲಿ ನಿಂತು ; ಬರ್ಮದವರಿಗೂ, ನಿರಾಶ್ರಿತರಿಗೂ, ಮಿಕ್ಕೆಲ್ಲ ಸಂಬಂಧಿಗಳಿಗೂ ಸಹಾಯ ಮಾಡುತ್ತಿದೆ. ನಿನಗೆ ಇದು ಗೊತ್ತಿರಬಹುದು. ಅಲ್ಲಿನ ಸಹಾಯ ಬೇಡಿ, ವಿಚಾರ ನಾವು ತಿಳಿಯೋಣವೇ ?'

'ನಿನ್ನ ಸಲಹೆ ಒಂದೇ ನಮಗೆ ಉಳಿದಿರುವ ಮಾರ್ಗವಾಗಿದೆ. ಅಲ್ಲಿಂದ ಸಂಗತಿ ತಿಳಿಯೋಣ. ನಮ್ಮಿಬ್ಬರ ಹಿತಚಿಂತಕರಾದ ಪ್ರೊ|| ಹೇಮಂತರನ್ನು ಬಲ್ಲೆಯಷ್ಟೆ ! ಅವರು ನನಗೆ ವಹಿಸಿದ ಸಾಮಾನ್ಯ ಕೆಲಸವೊಂದನ್ನು ನಾನು ನೆರವೇರಿಸಿಕೊಡಲಾರದೆ ಹೋದೆ!'

'ಅದು ಏನು ? ನನಗೂ ಏನೂ ತಿಳಿಯದು ಶೈಲ !' ಎಂದ ಮಹೇಶ.

ಶೈಲ-ಮಹೇಶರ ಸಂಭಾಷಣೆಯನ್ನು ಹತ್ತಿರ ಹತ್ತಿರವಾಗಿ ಕೇಳಿಬರುತ್ತಿದ್ದ ಪ್ರಭಾ, ಪ್ರೊ|| ಹೇಮಂತರ ಮಾತು ಬಂದು 'ನನಗೆ ಏನೂ ತಿಳಿಯದು' ಎಂದು ಮಹೇಶ ನುಡಿದುದನ್ನು ಕೇಳಿ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಪ್ರಭೆಯ ವ್ಯಸನಕ್ಕೆ, ಕಾರಣ ಅರಿಯದೆ ಗೆಳೆಯರಿಬ್ಬರೂ ಆಶ್ಚರ್ಯಪಟ್ಟರು.

ದುಃಖವನ್ನು ತಡೆದುಕೊಂಡ ಪ್ರಭಾ 'ನಿಮಗೆ ಹೇಮಂತರ ಸ್ಥಿತಿಗತಿ ಎಲ್ಲವೂ ತಿಳಿದಂತಿದೆ, ನಿಮಗೆ ಅವರು ಪರಿಚಿತರೆಂದು ಸಂಭಾಷಣೆಯಿಂದಲೇ ನನಗೆ ತಿಳಿಯಿತು' ಎಂದು ತನ್ನಳಲನ್ನು ಕಡಿಮೆಮಾಡಿಕೊಂಡಳು.

ಹೇಮಂತರಿಗಾಗಿ ದುಃಖಿಸುವವಳು ಯಾರಿರಬೇಕು ? ಅವರಿಗೆ ಇರುವವಳೊಬ್ಬಳು ಕುಮಾರಿ ಪ್ರಭೆ ಅಲ್ಲದೆ, ಮತ್ತಾರಿರುವರು ? ಎಂದು ಸುಲಭವಾಗಿ ತಿಳಿದ ಶೈಲ, 'ಪೂರ್ಣವಾಗಿ ಯಾವುದನ್ನೂ ತಿಳಿಯದೆ ದುಃಖಿಸುವುದರಿಂದ ಆಗುವುದೇನು ?' ಎಂದು ಪ್ರಭೆಯನ್ನು ಸಂತೈಸಲು ಯತ್ನಿಸಿದ.

'ನೀವು ಪ್ರೊ|| ಹೇಮಂತರ ಮಗಳೆಂದು ನಾನು ತಿಳಿಯುತ್ತಿದ್ದೇನೆ. ಇದುವರೆವಿಗೂ ಈ ವಿಚಾರ ಹೊರಬೀಳಲಿಲ್ಲವಾದುದಕ್ಕೆ ವ್ಯಸನ ಪಡಬೇಕಾಗಿದೆ, ಚಿಂತೆಯಿಲ್ಲ' ಎಂದು ಶೈಲ ಮಹೇಶನ ಕಡೆಗೆ ತಿರುಗಿದ. ಇವರು ಏನು ? ಮಾತನಾಡುತ್ತಿದ್ದಾರೆ ! ಆಕೆಯ ವ್ಯಸನಕ್ಕೆ ಕಾರಣವೇನು ? ಎಂದು ತಿಳಿಯಲು ಕೇಳುತ್ತಿದ್ದ ಮಹೇಶ, ಶೈಲನ ಹತ್ತಿರಕ್ಕೆ ಬಂದ.

'ಮಹೇಶ, ನಮ್ಮಿಬ್ಬರ ಅನಿರೀಕ್ಷಿತ ಭೇಟಿ ಇಲ್ಲಿ ನಡೆಯಿತು. ನನ್ನ ಮತ್ತು ನಿನ್ನ ಈ ಭೇಟಿಗೆ ಕಾರಣರಾದವರು ಯಾರೆಂದು ನಾನು ನಿನಗೆ ಹೇಳಬೇಕಾಗಿಲ್ಲ.

ಸಹಾಯಮಾಡಿದವರಿಗೆ, ಪ್ರತ್ಯುಪಕಾರವೊಂದು ನೀನು ಮಾಡಿಕೊಡಬೇಕು. ಈ ದಿನವೇ ನೀನು ಸಿಮ್ಲಾವಿಗೆ ಬರಿ, ಬರ್ಮಾ ಸರ್ಕಾರಶಾಖೆಯವರಿಗೆ ಖಂಡಿತವಾಗಿಯೂ ದತ್ತರ ವಿಚಾರ ತಿಳಿದಿರುವುದು. ಒಬ್ಬರ ನೆಲೆಯನ್ನು ನಾವು ಗೊತ್ತುಹಿಡಿದರೆ ಮಿಕ್ಕೆಲ್ಲ ಸಂಗತಿಯು ಹೊರಬೀಳುವುದು. ಈ ಕೆಲಸ ಇಂದೇ ನಡೆಯಬೇಕು. ನೀನು ಪ್ರತ್ಯುತ್ತರ ಬಂದ ಕೂಡಲೇ 'ಗ್ಲೇವ್ಯೂ' ವಿಗೆ ಧಾವಿಸಿ ಬರಬೇಕು ನಾನೂ ಅಲ್ಲಿಗೆ ಬಂದು ಸೇರಿರುವೆ ಎಂದು ಮಹೇಶನನ್ನು ಕಳುಹಿಕೊಟ್ಟ. ಮಹೇಶ ಬಾರ್ಥಲೋಮಿಯೊ ವೈದ್ಯಶಾಲೆಯಿಂದ ವೆಲ್ಲಿಂಗ್‌ಟನ್ ಮಾರ್ಗ ಹಿಡಿದು ಹೊರಟ. ಶೈಲ ವಹಿಸಿದ ಕೆಲಸವನ್ನು ಜಾಗ್ರತೆಯಿಂದ ನೆರವೇರಿಸಿಕೊಡುವ ಸಾಧನೆಯನ್ನು ಯೋಚಿಸುತ್ತ ಹೊರಟ.

೨೪

ಪ್ರಭಾ ವೈದ್ಯಶಾಲೆಯಲ್ಲಿಯೇ ನಿಂತಳು. ಅವಳನ್ನು ಸಮಾಧಾನ ಪಡಿಸಲು, ಶೈಲ- ಮೊದಲಿನಿಂದ ಕೊನೆಯವರೆವಿಗೂ ನಡೆದುದೆಲ್ಲಾ ವಿವರಿಸುವುದರಿಂದ ಸಾಧ್ಯವಾಗುವುದೆಂದು ಊಹಿಸಿ, 'ನಾನು ಹೇಳುವುದನ್ನೆಲ್ಲಾ ನೀವು ನಿಧಾನವಾಗಿ ಕೇಳಿ ತಿಳಿದಲ್ಲಿ, ವಿಚಾರವೇನೆಂದು ಗೊತ್ತಾದೀತು. ನಾನು ರಂಗೂನ್ ನಗರದಲ್ಲಿ ಕೆಲಸ ನೋಡುತ್ತಿದ್ದೆ. ಹೇಮಂತರ ಬಂಗಲೆಯಲ್ಲಿಯೇ ನಾನಿದ್ದುದು. ನನಗೂ ಅವರಿಗೂ ಬಲವಾದ ಸ್ನೇಹ ಬೆಳೆಯಿತು. ಯುದ್ಧ ಆರಂಭವಾಗುವುದಕ್ಕೆ ಮುಂಚೆಯೇ ನಾನು ಭಾರತಕ್ಕೆ ರಂಗೂನಿನಿಂದ ಹಿಂತಿರುಗಿದೆ. ಹೇಮಂತರಿಗೂ, ಅವರ ಮಾವಂದಿರಾದ ಚೌಧುರಿಯವರಿಗೂ ಬೆಳೆದ ಮನಸ್ತಾಪದ ಸಂಗತಿ ಹೇಮಂತರೇ ನುಡಿದಿದ್ದರು. ನಾನು ಭಾರತಕ್ಕೆ ಹೊರಡಲು ಸಿದ್ಧನಾದಾಗ ಹೇಗೂ ಭಾರತಕ್ಕೆ ಹೋಗುವೆ, ಕಟಕ್ ನಗರದಲ್ಲಿ ಮಗಳು ಪ್ರಭೆಯಿದ್ದಾಳೆ; ಅವಳಿಗೆ ಸೇರಿದ ಒಡವೆ ಪೆಟ್ಟಿಗೆಯೊಂದು ನನ್ನ ಬಳಿ ಇದೆ. ನೀನು ಕಟಕ್ ನಗರಕ್ಕೆ ಹೊರಟು, ವಿನಯ ಭೂಷಣ ಚೌಧುರಿಯವರ ವಶಕ್ಕೆ, ಕೊಡು, ಪ್ರಭೆಗೆ ತಲುಪುವುದೆಂದು ಹೇಳಿ ನನಗೆ ಕೆಲಸ ವಹಿಸಿದರು. ಸುಲಭದಲ್ಲಿ ಈ ಕಾರ್ಯ ನೆರವೇರಬಹುದೆಂಬ ಭಾವನೆಯಿಂದ ನಾನು, ಧೈರ್ಯವಾಗಿ ಕೆಲಸ ಮಾಡಿಕೊಡುವೆನೆಂದು ಒಪ್ಪಿಕೊಂಡೆ. ಭಾರತಸೇರಿದೆ. ಕಟಕ್ ನಗರಕ್ಕೆ ಬಂದು, ಚೌಧುರಿಯವರ ಗೃಹದ ಪತ್ತೆ ಹಚ್ಚಿದೆ.ನಾನು ಅಲ್ಲಿ ಅವರನ್ನು ಕಾಣಲಾಗಲಿಲ್ಲ. ನೆಲೆ ಸಿಕ್ಕದೆ ನಿರಾಶನಾದೆ.'

'ನನ್ನ ಹೆಸರು ಮಹೇಶ. ನಾನು ಶೈಲನ ಸಹೋದರ. ಬಹಳ ದಿನದಿಂದ ಅವನನ್ನು ನೋಡಲಾಗಲಿಲ್ಲ. ನಾನು ಹತ್ತಿರವಿರುವ, ವೆಲ್ಲಿಂಗ್‌ಟನ್ ಸಿಲ್ದಾಣದ ಆಯುಧಶಾಲೆಯಲ್ಲಿರುವೆ. ಶೈಲ 'ಗ್ಲೆನ್‌ವ್ಯೂ' ಭವನದಲ್ಲಿರುವುದು ನನಗೆ ತಿಳಿಯದು. ಈ ದಿನ ಆಕಸ್ಮಾತ್ತಾಗಿ ಪುಷ್ಪಪ್ರದರ್ಶನದಲ್ಲಿ ಶೈಲನ ಹೆಸರನ್ನು ಕಂಡೆ, ಅವನಿರುವ ಠಾವನ್ನು ಪತ್ತೆಮಾಡಿಕೊಂಡು ಬಂದೆ. ನನ್ನ ಸಹೋದರ ಅಪೂರ್ವವಾದ ಹೂಸೊಬಗನ್ನು ಬೆಳೆದಿರುವ, ಅಲ್ಲದೆ; ಗವರ್ನರ್‌ಅವರ ಕಡೆಯಿಂದ ಸುವರ್ಣ ಪದಕವನ್ನು ಗಳಿಸಿಕೊಂಡಿರುವ, ನಾನು ಅವನನ್ನು ಎಲ್ಲಿಕಾಣಬಹುದು? ಹೆಚ್ಚಿನ ವೇಳೆ ನನಗೆ ದೊರೆಯದು' ಎಂದು ತನ್ನ ಆತುರವನ್ನು ಪ್ರಭೆಗೆ ವ್ಯಕ್ತಪಡಿಸಿದ.

'ಶೈಲನನ್ನು ನೀವು ಇಲ್ಲಿ ಕಾಣಲಾರಿರಿ, ನನ್ನೊಡನೆ ಬನ್ನಿ, ಅವನಿರುವ ಸ್ಥಳವನ್ನು ತೋರುವೆ' ಎಂದು ಪ್ರಭಾ, ಮಹೇಶನೊಂದಿಗೆ ವೈದ್ಯಶಾಲೆಗೆ ಬಂದಳು.

ಸೆಂಟ್ ಬಾರ್ಥಲೊಮಿಯೋ ವೈದ್ಯಶಾಲೆಯಲ್ಲಿ, ಶೈಲ ಚೇತರಿಸಿಕೊಳ್ಳುತ್ತಿರುವನೆಂಬ ವಿಷಯ, ಹಾದಿ ನಡೆಯುತ್ತಿರುವಾಗ್ಗೆ ಮಹೇಶನಿಗೆ ತಿಳಿದುಬಂತು. ವೈದ್ಯಶಾಲೆ ಸಮೀಪಿಸಿದೊಡನೆಯೇ, ಹಠಾತ್ತನೆ ಪ್ರಭಾ ನಿಂತು, ಮಹೇಶನನ್ನು ಉದ್ದೇಶಿಸಿ 'ನಿಮ್ಮ ಸಹೋದರ, ಏನೂ ಅಂತಹ, ನೀವು ಕಳವಳ ಪಡುವಂತಹ ಸ್ಥಿತಿಯಲ್ಲಿಲ್ಲ. ವಿಶ್ರಾಂತಿ ತೆಗೆದುಕೊಳ್ಳುತ್ತಿರುವ. ಪ್ರದರ್ಶನಕ್ಕೆ ನೀವು ಹೋದುದು, ಅವನು ಬಹುಮಾನ ಪಡೆದುದು, ಎಲ್ಲವನ್ನೂ ನೀವು ಶೈಲನಿಗೆ ತಿಳಿಸಬಾರದು. ವಿಷಯವು ಗುಪ್ತವಾಗಿರುವುದೇ ಪ್ರಕೃತದಲ್ಲಿ ಯೋಗ್ಯವೆಂದು ನನ್ನ ಭಾವನೆ' ಎಂದು ಸೂಚನೆ ಮಾಡಿ, ವೈದ್ಯಶಾಲೆ ಪ್ರವೇಶಿಸಿದಳು.

೨೩

ಶೈಲನನ್ನು ಕಾಣುವುದೇ ಮುಖ್ಯ ಉದ್ದೇಶವಾಗಿಟ್ಟುಕೊಂಡು ಬರುತ್ತಿದ್ದ ಮಹೇಶ, ಬಹುಮಾನದ ಮಾತು ತಾನು ತೆಗೆಯುವುದಿಲ್ಲವೆಂದು ಮಾತುಕೊಟ್ಟ. ಶ್ರೀಮಂತ ತರುಣಿಯಾರು? ಶೈಲನ ವಿಚಾರವಾಗಿ ಏಕೆ? ಇವಳು ಆದರ ತೋರುತ್ತಿದ್ದಾಳೆ, ಎಂದು ತಿಳಿಯಲಾರದೆಯಿದ್ದ. ಶೈಲನ ಭೇಟಿಯಾಗಲಿ, ಮತ್ತೆ ವಿಚಾರ ಎಂದು ಶಾಂತನಾದ.

ಶೈಲನ ಹಣೆಯ ಪಟ್ಟಿನ್ನು ವೈದ್ಯಶಾಲೆಯವರು ಬಿಚ್ಚಿರಲಿಲ್ಲ. ಕಣ್ಣು ಭಾರವಾಗಿ, ತೊಂದರೆ ಆದೀತೆಂಬ ಕಾರಣದಿಂದ ಕಣ್ಣು ಮುಚ್ಚಿ ಕಟ್ಟಿಬಿಟ್ಟಿದ್ದರು. ಸಹಾಯಶೂನ್ಯನಾಗಿ, ಅಂಧನಾಗಿ ಬಿದ್ದಿದ ಶೈಲನನ್ನು ನೋಡಿದ ಮಹೇಶ, ಸಹಿಸಲಾರದೆ ಬಲವಾಗಿ ತಬ್ಬಿಕೊಂಡು ಮಾತನಾಡಿಸಿದ. ಬಂಧುಗಳ ಭೇಟಿಯನ್ನು ನೋಡುತ್ತಾ, ಪ್ರಭಾ ದೂರವಾಗಿ ನಿಂತಿದ್ದಳು.

ತಂದೆ-ಮಗಳ ಪ್ರೀತಿಯ ಆಳವನ್ನು ಕಂಡು, ದೂರವಾಗಿದ್ದ, ತಂದೆಗಾಗಿ ಪರಿತಪಿಸುತ್ತಿದ್ದ ಪ್ರಭಾ, ಸೋದರಭಾವದ ಪ್ರೀತಿಯ ಮಟ್ಟವನ್ನು ಶೈಲ-ಮಹೇಶರ ನಡುವೆ ಆದ ಭೇಟಿಯಿಂದ ಕಂಡಳು.

'ಮಹೇಶ! ನಿನ್ನನ್ನು ನೀಲಗಿರಿಯಲ್ಲಿ ಭೇಟಿಯಾಗುವನೆಂಬ ನಂಬಿಕೆ ನನಗಿರಲಿಲ್ಲ. ವೈದ್ಯಶಾಲೆಗೆ ಬಂದು, ನೀನು ನನ್ನನ್ನು ಭೇಟಿ ಮಾಡಿದುದು ಆಶ್ಚರ್ಯವಾದ ಸಂಗತಿಯೇ ಸರಿ! ನಿನ್ನನ್ನು ಇಲ್ಲಿಗೆ ಕರೆದು ಬಂದವರಾರು?' ಎಂದ ಶೈಲ.

ಮಹೇಶ, ಉತ್ತರ ಹೇಳುವುದರೊಳಗಾಗಿಯೇ ಪ್ರಭಾ, 'ನಿಮ್ಮನ್ನು ಹುಡುಕುತ್ತಾ 'ಗ್ಲೆನ್‌ವ್ಯೂ' ವಿಗೆ ಬಂದರು. ನಾನು ಇಲ್ಲಿಗೆ ಕರೆದುತಂದೆ' ಎಂದಳು.

'ನಿನಗೆ ನಾನಿರುವ ಜಾಗ ಹೇಗೆ ಪತ್ತೆಯಾಯಿತು? ಮಹೇಶ! ನೀನು ಇಲ್ಲಿರುವೆಯಾ? ನನಗೆ ವಿಷಯವೇ ತಿಳಿದಿಲ್ಲ. ನಿನ್ನನ್ನು ಕಂಡಬಗೆಯಾಯಿತು. ಮಿಕ್ಕವರು ಎಲ್ಲಿರುವರೋ? ತಿಳಿಯದು! ರಂಗೂನ್ ಬಿಟ್ಟನಂತರ ಏನೂ ತಿಳಿಯಲಾಗಲಿಲ್ಲ' ಎಂದ ಶೈಲ.

'ರಂಗೂನ್ ಬಿಟ್ಟನಂತರ ಏನೂ ತಿಳಿಯಲಾಗಲಿಲ್ಲ' ಎಂಬ ಕೊನೆಯ ಮಾತು ಪ್ರಭೆಯನ್ನು ಕೆರಳಿಸಿತು. ಅವಳು ಸಂಭಾಷಣೆಯಲ್ಲಿ ಪೂರ್ಣ ಆಸಕ್ತಳಾದಳು.

'ಮಿಕ್ಕವರ ಗೊಡವೆಯಿಂದೇನು ಶೈಲಾ! ಎಲ್ಲರೂ ನೆಮ್ಮದಿಯಿಂದಿದ್ದಾರೆಂದು ನಾನು ನಂಬಿರುವೆ. ಅವರಿಗಾಗಿ ನೀನು ಚಿಂತಿಸಬೇಡ. ವೈದ್ಯಶಾಲೆಯಿಂದ ಹೊರಬೀಳುವ ವೇಳೆಗಾಗಿ ಕಾಯುತ್ತಿರು, ಮುಂದೆ ನೋಡೋಣ' ಎಂದ ಮಹೇಶ.

'ತಿಳಿಯುವವರೆವಿಗೂ ಸಮಾಧಾನವಾಗುವುದಿಲ್ಲ. ದತ್ತ ರೆಲ್ಲಿದ್ದಾರೆ? ಮಹೇಶ!'

'ಭಾರತಕ್ಕೆ ಹಿಂತಿರುಗಿದಾಗ ನನಗೆ ಸಹಾಯಿಗಳು ಯಾರೂ ಇರಲಿಲ್ಲ. ಉದ್ಯೋಗವನ್ನು ಅರಸಿಕೊಂಡು ಹೊರಡಬೇಕಾಯಿತು. ಕಾರಣಾಂತರದಿಂದ 'ಗ್ಲೇವ್ಯೂ' ಅಲ್ಲಿ ನಿಂತೆ. ಭೀತಿ, ತೊಂದರೆ, ಅಸಹಕಾರಗಳು ನನ್ನನ್ನು ಇಲ್ಲಿಯೂ ಮುತ್ತಿದವು. ಸೋಮಯ್ಯ, ನನಗೆ ಮುಖ್ಯವಾಗಿ ತೊಂದರೆಗೆ ಕಾರಣನಾದ.'

'ನಿರಾಶೆಯಿಂದ ನನಗೆ ಅತಿ ಬೇಸರವಾಯಿತು. ತೋಟದ ವ್ಯವಸ್ಥೆಯಲ್ಲಿದ್ದ ನಾನು, ತೀರ ಪ್ರಯೋಗಶಾಲೆ ಸೇರಿಬಿಟ್ಟು ಹೊರಗೆ ಬಾರದೆ ಹೋದೆ. ಸೌಧಕ್ಕೆ ಜನರು ಬಂದಿರುವುದು, ನನಗೆ ಸೋಮಯ್ಯನಿಂದಾಗಲೀ ರುದ್ರನಿಂದಾಗಲೀ ತಿಳಿಯಲಿಲ್ಲ. ನನಗೂ ನಿಮಗೂ ಈ ಮುಂಚೆ ಭೇಟಿಯಾಗದಿರುವುದಕ್ಕೆ ಈ ಕಾರಣವೇ ಮುಖ್ಯವಾಗಿದೆ.'

'ಒಂದು ಸಾರಿ ಪ್ರಯೋಗಶಾಲೆಯಿಂದಲೇ ನಾನು, ನಿಮ್ಮನ್ನು ನೋಡಿದೆ. ನೀವು ಅತ್ಯಾಶೆಯಿಂದ ಹೂ ಕೀಳುತ್ತಿದ್ದುದು ನನಗೆ ಗೊತ್ತಾಯಿತು. ಸೌಧದ ಶ್ರೀಮಂತರೊಬ್ಬರು ಹೂವನ್ನು ನೋಡಿ, ತೋಟದಲ್ಲಿ ಸುತ್ತಾಡುತ್ತಿದ್ದಾರೆ ಎಂದು ತಿಳಿದೆ. ಸೌಧಕ್ಕೆ ಅರಸರು ಬಂದಿಳಿದಿರುವರು, ನನಗೆ ಅವರಿಂದ ಕರೆ ಬರುವುದು ಎಂದು ಊಹಿಸಿದ್ದ ನನಗೆ, ಮತ್ತೆ ನಿರಾಶೆಯಾಯಿತು. ಕ್ಷುದ್ರ ಜೀವಿಯನ್ನು ಯಾರೂ ಪರಿಗಣಿಸರೆಂದು ನಾನು ದುಃಖಪಟ್ಟೆ. 'ಗ್ಲೇವ್ಯೂ' ಸೌಧದಲ್ಲಿ ಬಂದಿಳಿದಿರುವವರು ಅರಸರಲ್ಲ. ಹೇಮಂತರ ಕುಮಾರಿ ಪ್ರಭೆಯೆಂದು ನನಗೆ ಹೇಗೆ ತಿಳಿಯಬೇಕು? ಹೀಗೆ ಚೌಧುರಿಯವರಾಗಲೀ ನೀವಾಗಲೀ ನನ್ನ ದೃಷ್ಟಿಗೆ ಬೀಳಲಿಲ್ಲ. ಈಗ ಚೌಧುರಿಯವರೆಲ್ಲಿದ್ದಾರೆ' ಎಂದು ಪ್ರಭೆಯನ್ನು ಕೇಳಿ, ಶೈಲ ಹೇಳಿಕೆಯನ್ನು ನಿಲ್ಲಿಸಿದ.

'ಗ್ಲೇವ್ಯೂ' ಅಲ್ಲಿಯೇ ಇದ್ದಾರೆ ಎಂದು ಪ್ರಭಾ, ಮೂಕಳಾಗಿ ಕುಳಿತಿದ್ದ ಸ್ಥಳದಿಂದಲೇ ಉತ್ತರವಿತ್ತಳು.

'ನಾನು ಅವರನ್ನು ಕಾಣಬೇಕು. ನನ್ನ ಕಣ್ಣಿಗೆ ಕಟ್ಟಿರುವುದನ್ನು ಬಿಚ್ಚಿದ ಮೇಲೆ ಆ ಯೋಚನೆ' ಎಂದುಕೊಂಡ ಶೈಲ, ನಿರುಪಾಯನಾಗಿ ಹೊರಳಿ ಮಲಗಿದ.

'ನಾನು ಪುನಃ ನಾಳೆ ಬಂದು ಕಾಣುವೆ, ನಿಮಗೆ ಇಲ್ಲಿಂದ ಬಿಡುಗಡೆಯಾಗುವುದೆಂದು ತಿಳಿದು ಸಂತೋಷವಾಗಿದೆ, ಹೊರಡುವೆ' ಎಂದು ಪ್ರಭಾ ಎದ್ದು ನಿಂತಳು.

'ಒಂದೆರಡು ದಿನದ ಮಟ್ಟಿಗೆ ನಿಮ್ಮ ಮಾನಸಿಕ ಬೇಗೆಯನ್ನು ಸುಧಾರಿಸಿ, ನೇರವಾಗಿ ಸಿಮ್ಲಾವಿನಿಂದ ಸುದ್ದಿ ತಿಳಿಯುವುದು. ನಾನು ಕೈಲಾದಮಟ್ಟಿಗೆ, ಹೇಮಂತರನ್ನು ಕಾಣಲು ಸಹಾಯ ಮಾಡುವೆ' ಎಂದು ಶೈಲ, ಪ್ರಭೆಯನ್ನು ಕಳುಹಿಕೊಟ್ಟ.

೨೫

ವೈದ್ಯಶಾಲೆಯಿಂದ ಬಂದನಂತರ ಪ್ರಭಾ, ಶೈಲಸೌಧದಲ್ಲಿಯೇ ಇಳಿದುಕೊಳ್ಳುವ ವ್ಯವಸ್ಥೆ ಮಾಡಿದಳು. ಬಹಳವೇಳೆ ವೈದ್ಯಶಾಲೆಯಲ್ಲಿ ಅವಳು ಕಳೆದುದರಿಂದ, ಸೋಮಯ್ಯನನ್ನು ಕಾಣಲಾಗಲಿಲ್ಲ. ಅವನು 'ಗ್ಲೆನ್‌ವ್ಯೂ' ವಿಗೆ ಹಿಂತಿರುಗಿ ಬರಲಿಲ್ಲವೆಂದು ಖಚಿತವಾಗಿ ತಿಳಿದುಕೊಂಡವಳು ಅವನ ಹಾದಿ ನೋಡುತ್ತ ಕುಳಿತಳು. ಶೈಲನಿಗೆ ದೊರೆತ ಬಹುಮಾನವನ್ನು ಪಡೆದುಕೊಳ್ಳಲು ಆತುರದಿಂದಿದ್ದಳು.

'ಷಿವಸ್ಸ್‌ಪಾರ್ಕ್' ಪ್ರದರ್ಶನ ಮುಗಿಸಿಕೊಂಡು ಸೋಮಯ್ಯ ಬರುತ್ತಿದ್ದ. ಸೋಮಯ್ಯನಿಂದ ಅಷ್ಟು ಕಷ್ಟನಷ್ಟ ಶೈಲನಿಗಾಯಿತೆಂದು ಪ್ರಭಾ ಯೋಚಿಸುತ್ತಿದ್ದ ವೇಳೆಗೆ ಸರಿಯಾಗಿ, ಅವನು 'ಗ್ಲೆನ್‌ವ್ಯೂ' ಪ್ರವೇಶಿಸಿದ.

'ಪ್ರದರ್ಶನದಲ್ಲಿ ದೊರೆತ ಸುವರ್ಣಪದಕವೆಲ್ಲಿ' ಎಂದು ಪ್ರಭೆ, ಸೋಮಯ್ಯನನ್ನು ಪ್ರಶ್ನಿಸಿ ಕೈಚಾಚಿದಳು.

ಬಹುಮಾನದ ಸಂಗತಿ ಪ್ರಭೆಗೆ ತಿಳಿದಿರಲಾರದು ಎಂದು ಊಹಿಸಿದ್ದ ಸೋಮಯ್ಯ, ಹಠಾತ್ತನೆಯ ಪ್ರಶ್ನೆಗೆ ಉತ್ತರ ಕೊಡಲು ತಡವರಿಸುತ್ತಾ 'ಗವರ್ನರ್‌ಅವರ ಕಡೆಯಿಂದ ದೊರೆತ ಸುವರ್ಣಪದಕ ನನ್ನ ಬಳಿಯಿದೆ, ಸಸ್ಯವೈಜ್ಞಾನಿಕ ಸಂಘದವರಿಂದ ಬಂದುದು ನನ್ನ ಹತ್ತಿರವಿಲ್ಲ' ಎಂದು ನುಡಿದು ಪದಕವನ್ನು ಪ್ರಭೆಯ ಕೈಗಿತ್ತು ಹೊರಟು ಹೋದ.

ಸೈನಿಕನೊಬ್ಬನು ಪ್ರದರ್ಶನವೇಳೆಯಲ್ಲಿ ತನಗೆ ಕಾಣಿಸಿದುದು. ಶೈಲನನ್ನು ಕುರಿತು ಅವನು ತನ್ನನ್ನು ಪ್ರಶ್ನಿಸಿದುದು ಎಲ್ಲವೂ ಸೋಮಯ್ಯನಿಗೆ ನೆನೆಪಾಯಿತು. ಮರೆಮಾಚುವುದರಿಂದ ಏನೂ ನಡೆಯದು, ಅವನು ಎಲ್ಲವನ್ನೂ ತಿಳಿಸಿ ಹೋಗಿರುವ, ಮಾರಾಟದಿಂದ ಬಂದ ಲಾಭದ ಹಣವನ್ನು ಇವರು ಕೇಳದಿದ್ದರೆ ಸಾಕು ! ಎಂದು ತೃಪ್ತಿಯಿಂದಿದ್ದ.

ಪ್ರಭೆಯ ಕೈಗೆ ಪದಕ ಸೇರಿತು. ಶ್ರಮಜೀವಿ ಶೈಲ ತನಗೆ ದೊರೆತ ಬಹುಮಾನವನ್ನು ಕಂಡು ಎಷ್ಟು ? ಆನಂದ ಪಡುವನು ಎಂದು ಅವಳು ನೆನೆದಳು. ಈ ಪದಕ ಗುಟ್ಟಿನಲ್ಲಿ ಅಡಗಿರಬೇಕು, ನನ್ನ ಸ್ವಾಧೀನದಲ್ಲಿಯೇ ಇರಲೆಂದು ಭದ್ರಪಡಿಸಿದಳು. ಒಂದು ಬಗೆಯಲ್ಲಿ, ತನ್ನದೇ ಆ ಪದಕವೆಂಬ ಹಿಗ್ಗಿನಲ್ಲಿ ಮೆರೆದುಹೋದಳು.

'ಸಿಮ್‌ಸ್ಸ್‌ಪಾರ್ಕ್' ವಿಶಾಲ ಉದ್ಯಾನವನಕ್ಕೆ ಹೋಗಿದ್ದ ಹೂಕುಂಡಗಳು, ವನಮಾಲಿಯ ಅಜ್ಞಾತ ಪ್ರಯೋಗಮಂದಿರವನ್ನು ಮತ್ತೆ ಸೇರಿತು. ಹೂ ಪ್ರದರ್ಶನ ನಡೆದು, ಬಂದ ಬಹುಮಾನ ಕೈಬಿಟ್ಟ ಸಂಗತಿ ಮಾತ್ರ ಸೋಮಯ್ಯನಿಗೆ ತಿಳಿದಿತ್ತು. ಪ್ರಭೆ ವೈದ್ಯಶಾಲೆಗೆ ಹೋದುದು, ಮಹೇಶ 'ಗ್ಲೆನ್‌ವ್ಯೂ' ಗೆ ಬಂದು ಹೋದುದು ಅವನು ಅಷ್ಟಾಗಿ ಗಮನಿಸಲಿಲ್ಲ.

ವೈದ್ಯಶಾಲೆಯಲ್ಲಿ ನಡೆದ ಸಂಭಾಷಣೆಯನ್ನು ಚೌಧುರಿಯವರಿಗೆ, ಪ್ರಭೆ ವರದಿಮಾಡಿದಳು. ಮುಂದಾಗಿ ತೋಟಗಾರನನ್ನು ವೈದ್ಯಶಾಲೆಯಿಂದ ಕರೆತರುವ ವಿಷಯವನ್ನು ತಿಳಿಸಿದಳು. 'ಬೆಳಕಿನ ಕಾಂತಿಯೊಂದನ್ನು ಕಾಣಲು ನಮಗೆ ಯೋಗವಿದೆ' ಎಂದುಕೊಂಡ ಚೌಧುರಿಯವರು, ಧೈರ್ಯಶಾಲಿ ಶೈಲನನ್ನು ಕಾಣುವುದಕ್ಕೆ ಹಾತೊರೆಯುತ್ತಿದ್ದರು.

ಸಿಮ್ಲಾವಿಗೆ ಮಹೇಶ ಕೊಟ್ಟ ಸುದ್ದಿ, ಉತ್ತಮವೇ ಆಯಿತು. ಬರ್ಮಾ ಸರ್ಕಾರದ ಪ್ರಮುಖ ಅಧಿಕಾರಿ, ನೇರವಾಗಿ ದತ್ತರಿಗೆ ತಿಳಿಸಿದ. ಶೈಲ ನೆನೆದಂತೆ ಮಾಂಡಲೆ ಬಿಟ್ಟುಬಂದ ಅಬುಜದತ್ತರು, ಸಿಮ್ಲಾದಲ್ಲಿಯೇ ಇದ್ದರು. ಹೇಮಂತರನ್ನು ತಮ್ಮೊಂದಿಗೆ ಕರೆದು ಬಂದಿದ್ದರು. ಅಬುಜದತ್ತರಿಂದ ಹೇಮಂತರಿಗೂ ಸುದ್ದಿ ತಲುಪಿತು. ಅವರು ಶೈಲ ಮಹೇಶರಿಬ್ಬರೂ ನೀಲಗಿರಿಯಲ್ಲಿರುವುದನ್ನು ತಿಳಿದು ಆನಂದಪಟ್ಟರು. 'ನೀವು ನೀಲಗಿರಿಗೆ ಹೊರಟು, ಶೈಲನನ್ನು ಕಾಣಿರಿ ; ನಿಮ್ಮ ಬಹುದಿನದ ಖೇದವಾದರೂ ಕಡಿಮೆಯಾದೀತು' ಎಂದು ಸಲಹೆ ಕೊಟ್ಟರು. ಅಬುಜದತ್ತರು ಕೊಟ್ಟ ಸಲಹೆ, ಹೇಮಂತರಿಗೆ ಸಾಧುವಾಗಿಯೇ ಕಂಡಿತು. ಶೈಲನನ್ನು ಕಂಡಲ್ಲಿ, ಮಗಳೆಲ್ಲಿರುವಳೆಂಬ ಸೂಚನೆ ತಿಳಿಯುವುದೆಂದು ಹೇಮಂತರು, ಸಿಮ್ಲಾವಿನಿಂದ ನೀಲಗಿರಿಗೆ ಹೊರಟರು. ಅಬುಜದತ್ತರೇ ಅವರನ್ನು ಪ್ರೇರೇಪಿಸಿ ಕಳುಹಿಸಿದರು.

ಕಟಕ್ ನಗರದಲ್ಲಿ ಶೈಲ ಶೋಧನೆ ನಡಿಸಿ ವಿಫಲನಾದಂತೆ, ಹೇಮಂತರೂ ಆಶಾಭಂಗ ಹೊಂದಿದರು. ಸಿವಸ್ಲಾವಿನಲ್ಲಿ ಅಬುಜದತ್ತರೊಂದಿಗೆ ನಿಂತ ವೇಳೆಯಲ್ಲಿ, ಮಹೇಶನಿಂದ ಬಂದ ವರ್ತಮಾನ ಅವರನ್ನು ಉತ್ತೇಜನಗೊಳಿಸಿತು. ನೀಲಗಿರಿಗೆ ಪ್ರಯಾಣ ಮಾಡಬೇಕೆಂಬ ಅಬುಜದತ್ತರ ಒತ್ತಾಯದಿಂದ, ಅವರು ಪ್ರವಾಸ ಕೈಗೊಂಡರು.

ಪೂರ್ವದಲ್ಲಿ ಯುದ್ಧ ಬಿಸಿ, ಉಷ್ಣಮಾಪಕದಉಷ್ಣಾಂಶ ಇಳಿದುಹೋಗುವ ಹಾಗೆ ಇಳಿಯ ತೊಡಗಿತು. ಶೈಲ, ವೈದ್ಯಶಾಲೆಯಿಂದ 'ಗ್ಲೇವ್ಯೂ' ಭವನಕ್ಕೆ ಬಂದಿದ್ದ. ಚೌಧುರಿಯವರು ಅವನನ್ನು ಬರಮಾಡಿಕೊಂಡರು.

ನೀಲಗಿರಿಯ ವೆಲ್ಲಿಂಗ್‌ಟರ್ ಸೇರಿದ ಹೇಮಂತರು, ಮಹೇಶನನ್ನು ಭೇಟಿ ಮಾಡಿದರು. ಮಹೇಶ, ಹೇಮಂತರೊಂದಿಗೆ 'ಗ್ಲೇವ್ಯೂ' ವಿಗೆ ಅಂದು ಬರಲಾಗಲಿಲ್ಲ. ಅವಕಾಶ ದೊರೆಯದ ಕಾರಣ, ಅವನು ಹೇಮಂತರಿಗೆ ಸುಲಭವಾಗಿ 'ಗ್ಲೇವ್ಯೂ' ಮಾರ್ಗ ಸಿಕ್ಕಲು ಸಹಾಯಕನೊಬ್ಬನನ್ನು ಗೊತ್ತುಮಾಡಿ ಕೊಟ್ಟು ಕಳುಹಿಸಿದ.

ಹೇಮಂತರು 'ಗ್ಲೇವ್ಯೂ' ಸೇರಿದರು. ಯುದ್ಧಾರಂಭದಿಂದ ಎಷ್ಟು ? ಮಾರ್ಪಾಡು ಆಗಿ ಹೋಗಿದೆಯೋ, ಎಂದು ಸಂಕಟಪನು ನೆನೆಯುತ್ತಾ ಅವರು, ಬಂದರು. ಇಲ್ಲಿ ಶೈಲ ಇದ್ದಾನೆ ! ನನಗೆ ಅವನಿಂದ ಪ್ರಭೆಯ ನೆಲೆ ತಿಳಿಯುವುದು, ಎಂದು ಎಣಿಸಿ ಬರುತ್ತಿದ್ದ ಹೇಮಂತರು ಕಂದು, ಸೊರಗಿ ಹೋಗಿದ್ದ ಚೌಧುರಿಯವರನ್ನು ಮೊದಲಾಗಿ ಕಂಡರು. ಅತಿ ಪ್ರಯಾಸದಿಂದ ತಾವು ನಡೆಸಿದ ಶೋಧನೆಯನ್ನು ಚೌಧುರಿಯವರಿಗೆ ವಿವರಿಸುತ್ತಿದ್ದಾಗಲೇ ಪ್ರಭೆಯು ಬಂದು ಸೇರಿದಳು. ದಿನವೂ ಕ್ಷಣವೂ ಪ್ರಭೆಗಾಗಿ ಮರುಗುತ್ತಿದ್ದ ಹೇಮಂತರು ಅವಳನ್ನು ಬರಸೆಳೆದು ಅಪ್ಪಿಕೊಂಡರು.

'ಶೈಲ, ಎಲ್ಲಿ ಪ್ರಭಾ!' ಎಂದು ಕೇಳಿದಾಗಲೇ ಪ್ರಭೆಗೆ ಎಚ್ಚರವಾಯಿತು.

'ತೋಟದಲ್ಲಿರಬಹುದು' ಎಂದು ಹನಿ ಉದರುತ್ತಿದ್ದ ಕಣ್ಣುಗಳನ್ನು ಒರಿಸುತ್ತಾ ಅವಳು ನುಡಿದಳು.

'ಯುದ್ಧ, ಈ ತಾರುಮಾರಿನಲ್ಲಿ ನಿನ್ನನ್ನು ಪುನಃ ಕಾಣುವ ಭರವಸೆಯೆ ನನಗಿರಲಿಲ್ಲ ಪ್ರಭಾ' ಎಂದ ಹೇಮಂತರು, ತಮ್ಮ ಪ್ರಯಾಣದ ಕಷ್ಟಸಷ್ಟಗಳನ್ನು ನಿವರಿಸಿದರು. ಚೌಧುರಿಯವರು ಎಲ್ಲಿಂದ ಯಾವ ಜಾಗಕ್ಕೆ ಬಂದು ನಿಂತಿ

ದ್ದಾರೆ. ಯಾರಿಂಗೂ ಅವರ ಸುಳಿವಿಲ್ಲದಂತೆ ಮರೆಯಾಗಿದ್ದಾರೆ ಎಂಬುದನ್ನು ಆಗ ಯೋಚಿಸಿದರು. ಜೀವದಾಶೆಯನ್ನೇ ಬಿಟ್ಟಿರುವ ಹಾಗೆ ಕಾಣುತ್ತಾರೆ. ಶೈಲನ ನೆರವು, ಸಹಾಯ ಸಂಪತ್ತು ಇವರಿಗೆ ಒದಗಿರುವುದು ಆಶ್ಚರ್ಯವೇ ಸರಿ ಎಂದು ತಿಳಿದವರು,

'ಶೈಲ ಎಲ್ಲಿರುವ?' ಎಂದು ಮತ್ತೊಮ್ಮೆ ಕೇಳಿದರು.

'ಅನಿಶ್ಚಿತ ಕಾಲದಲ್ಲಿ ನಿಮಗೆ ಶೈಲ ಹೇಗೆ ದೊರೆತ? ಅವನು ಯಾವ ವೃತ್ತಿ ಕೈಗೊಂಡಿರುವ?' ಎಂದು ಕುತೂಹಲದಿಂದ ಹೇಮಂತರು, ಪ್ರಭೆಯನ್ನು ಕೇಳಿದರು.

ಪ್ರಭಾ, ತಾನು ನಡೆಸಿದ ಶೋಧನೆ, ತೋಟಗಾರ ಶೈಲನ ಅಂತರ್ಯ ವಿಚಾರ, ನಡತೆ, ಸಂಯಮ, ಸಾಧನ ಸಂಪತ್ತು, ಕೆಚ್ಚು ಎಲ್ಲವನ್ನೂ ಹೇಮಂತ ರಿಗೆ ವಿವರಿಸಿದಳು. ಸುವರ್ಣಪಥಕದ ಮಹತ್ವ ತಿಳಿಸಿದ ಪ್ರಭಾ, ತಾನು ಕೋರಿದ ವಜ್ರಹಾರ ಹೇಗೆ ಕೈಸೇರಿತೆಂಬುದನ್ನು ವಿವರಿಸಿದಳು. ಶೈಲನಿಗೆ ದೊರೆತ ಬಹುಮಾನವನ್ನು ಹೇಮಂತರು ತಮ್ಮ ಹತ್ತಿರವೇ ಇಟ್ಟುಕೊಂಡು, ಪ್ರಭಾ ವಿವರಿಸಿದುದನ್ನು ಪುನಃ ಪುನಃ ನೆನೆದರು.

ತಂದೆಯವರು, ಶೈಲನನ್ನು ಎಷ್ಟು ? ಪ್ರೀತಿಸುತ್ತಾರೆ, ಎಂದವರ ಪ್ರೀತಿಯ ಆಳವನ್ನು ಕಂಡುಕೊಂಡವಳು 'ಶೈಲ ನಡಿಸುತ್ತಿರುವುದೇನು ? ಎಂದು ತಿಳಿಯಲು ನೀವು ಇಚ್ಛೆ ಪಡುತ್ತಿರುವಿರಿ, ಇಲ್ಲಿಂದಲೇ ಕಾಣುವ ತೋಟವನ್ನು ಒಮ್ಮೆ ನೋಡಿ' ಎಂದು ಹೇಮಂತರನ್ನು ಸೌಧದ ಕಿಟಕಿಯಿಂದಲೇ ದೂರದ ತೋಟವನ್ನು ನೋಡುವಂತೆ ಹೇಳಿದಳು. ಅರಳುತ್ತಿದ್ದ ಹೂಗಳನ್ನು ನೋಡುತ್ತಾ ಹೇಮಂತರು ಹರ್ಷಗೊಂಡರು.

೨೬

ವೆಲ್ಲಿಂಗ್‌ಟನ್ ಅಲ್ಲಿಂದ ಮಹೇಶ 'ಗ್ಲೇವ್ಯೂ' ವಿಗೆ ಬಂದ. ಶೈಲನನ್ನು ಸಂಧಿಸಿದ ಹೇಮಂತರು, ಮಹೇಶನಿಗಾಗಿ ಕಾಯುತ್ತಿದ್ದರು. ಸೌಧದಲ್ಲಿ ಕೆಲವು ದಿನವಿದ್ದು ಪುನಃ ಶೈಲ ಪ್ರಯೋಗಶಾಲೆಯ ಕಡೆಗೆ ಹೊರಟ. ಹಿಂದಿನಂತೆ ಅಲ್ಲಿಯೇ ಅವನು ಪೂರ್ಣವಾಗಿ ನಿಲ್ಲಲು ಪ್ರಭೆಯು ಅಡ್ಡಿಮಾಡಿದಳು.

ತೋಟದಲ್ಲಿ ಸುತ್ತಾಡಲಾರಂಭಿಸಿದ ಶೈಲ. ಅದಲು ಬದಲಾದ ಹೂಕುಂಡಗಳನ್ನು, ಚದರಿದ ಹೂ ಪಾತಿಗಳನ್ನು ನೋಡಿದ. ಬೆಳೆದವೆಲ್ಲ

ಹೂಗಿಡಗಳು ಪ್ರದರ್ಶನಕ್ಕೆ ಹೋಗಿ ಸೇರಿ, ಬಹುಮಾನ ಗಳಿಸಿಕೊಂಡುದುದು ಇನ್ನೂ ಅವನಿಗೆ ತಿಳಿದಿರಲಿಲ್ಲ. ಈ ವ್ಯತ್ಯಾಸಕ್ಕೆ ತಾನು ದೂರವಾಗಿದ್ದುದೇ ಕಾರಣವೆಂದು ನಂಬಿಹೋದ.

ಶೈಲ, ಹೇಮಂತ, ಮಹೇಶ, ಎಲ್ಲರೂ 'ಗ್ಲೇವ್ಯೂ' ಅಲ್ಲಿ ಒಮ್ಮೆ ಕೂಡಿಕೊಂಡರು. ಕೈಯಲ್ಲಿ ಸುವರ್ಣಪದಕವನ್ನಿಟ್ಟುಕೊಂಡಿದ್ದ ಹೇಮಂತರು, ಶೈಲನಿಗೆ ತೋರುತ್ತಾ 'ಈ ಪದಕ ಯಾರಿಗಿರಬಹುದು ಶೈಲಾ' ಎಂದು ಕೇಳಿದರು.

ವಿಷಯ ತಿಳಿಯದ ಶೈಲ 'ನನಗೆ ತಿಳಿಯದು, ನೀವುಕಳುಹಿಸಿದ ಒಡವೆಗಳ ಪೈಕಿಯವೆಂದು ತಿಳಿಯುತ್ತೇನೆ' ಎಂದ.

ಹೇಮಂತ-ಮಹೇಶ ಗೆಳೆಯನ ಈ ಮಾತಿಗೆ ನಕ್ಕು, ಪದಕ ದೊರೆತ ವಿಷಯವನ್ನು ವಿವರಿಸಿದರು. ಈ ಮಾತಿನ ವೇಳೆಯಲ್ಲಿ ಪ್ರಭೆಯೂ ಬಂದು ಸೇರಿದಳು. ಪದಕದ ವಿವರಣೆ ಮುಗಿದನಂತರ, ಶೈಲನಿಗಾಗಿ ವೈಜ್ಞಾನಿಕ ಸಂಘದವರಿಂದ ಬರುವ ಯೋಗ್ಯತಾಪತ್ರಿಕೆಯ ವಿವರಣೆಯನ್ನು ಎಲ್ಲರಿಗೂ ತಿಳಿಸಿದಳು.

'ನನ್ನ ವಶಕ್ಕೆ ಕೊಟ್ಟ ಪೆಟ್ಟಿಗೆಯು ನನ್ನದೇ ಆಗಿದೆ. ನೀವು ಸರಿಯಾದ ಹಕ್ಕುದಾರರಿಗೆ ಕೊಟ್ಟಿರುವಿರಿ. ಈ ಪದಕ ನಿಮ್ಮ ಸಾಹಸಕ್ಕೆ, ಪರಿಶ್ರಮಕ್ಕೆ ಸಿಕ್ಕಿದಂತಹ ಬಹುಮಾನವಾಗಿದೆ' ಎಂದು ಹೇಳಿ, ಶೈಲ ವೈದ್ಯಶಾಲೆ ಸೇರಿದಾನಂತರ ನಡೆದುದೆಲ್ಲವನ್ನೂ ಅವನಿಗೆ ತಿಳಿಸಿದಳು.

'ವೈದ್ಯಶಾಲೆಯಲ್ಲಿದ್ದ ನನಗೆ ಏನೂ ತಿಳಿಯಲಿಲ್ಲ. ನಿಮ್ಮಿಂದಲೇ ನನಗೆ ಬಹುಮಾನ ದೊರೆಯಿತು' ಎಂದ ಶೈಲ.

'ಸಹಾಯ, ಸಂಶೋಧನೆ, ಈ ಎಲ್ಲಾ ಕಾರಣ ನಮ್ಮೆಲ್ಲರ ಮಿಲನಕ್ಕೆ ಕಾರಣವಾಯಿತು ಶೈಲಾ! ನಿನ್ನ ಸಾಹಸವನ್ನು ನಾನು ಕೇಳಿ ತಿಳಿದಿರುವೆ ಎಂದರು ಹೇಮಂತರು.

'ಪ್ರಭೆಯು ನಡೆಸಿದ ಕಾರ್ಯಭಾರದಲ್ಲಿ ಬೆಳೆದವುಗಳು ಜನರ ಕಣ್ಣಿಗೆ ಬಿದ್ದವು. ಈ ಸಾಮಾನ್ಯನು ಬೆಳೆದ ಹೂಗಳಿಗೆ, ಮೆಚ್ಚುಗೆ ದೊರೆಯುವ ಹಾಗಾಯಿತು. ನನಗಿರುವಂತೆಯೇ ಪ್ರಭೆಗೂ ನವಸೃಷ್ಟಿಯಲ್ಲಿ, ಈ ಸಸ್ಯ ಪ್ರಕರಣದಲ್ಲಿ ಅಭಿರುಚಿಯಿರಬೇಕು!' ಎಂದ ಶೈಲ.

'ನಾನು 'ಮೈಥಿಲಿ' ಯಲ್ಲಿ ಹಿಂದೆಯೇ ನಿನಗೆ ಸೂಚನೆ ಮಾಡಿದ್ದೆ. ಹೂಗಳೆಂದರೆ ಅವಳಿಗೂ ಮಹದಾಶೆ, ನೀನು ಬೆಳೆಸಿದ ಹೂಗಳು ಅನೇಕರಿಗೆ ಪ್ರಿಯವಾಗಿರುವಾಗ, ಮೆಚ್ಚುಗೆಯೂ ಪಡೆದಿರುವಾಗ ಬೇರೆ ಏನು ?'' ಎಂದರು ಹೇಮಂತರು.

೨೭

ಚೌಧುರಿ, ಹೇಮಂತ, ಶೈಲ, ಪ್ರಭಾ ಎಲ್ಲರೂ ಸರಿಸಮಾನಸ್ಕಂಧರಂತೆ 'ಗ್ಲೇವ್ಯೂ' ಅಲ್ಲಿ ಇರತೊಡಗಿದರು. ಮಹೇಶ ವೆಲ್ಲಿಂಗ್ಟರ್ಟ್ ಅಲ್ಲಿಂದ ಆಗಾಗ ಬರುತ್ತಲೇ ಇದ್ದ. ಶೈಲನ ಯಶೋತೇಜಕ್ಕೆ ತಾನು ಮುಖ್ಯ ಕಾರಣಳೆಂಬ ಹೆಮ್ಮೆ ಪ್ರಭೆಗೆ ಬಂದಿತು. ಅವಳು ಶೈಲನೊಂದಿಗೆ ತೋಟದಲ್ಲಿ ಸುತ್ತಾಡಲಾರಂಭಿಸಿದಳು.

'ನಾನು ಹೊಸಬೆಳಕೊಂದನ್ನು ಕಾಣುತ್ತಿದ್ದೇನೆ. 'ಗ್ಲೇವ್ಯೂ' ನನಗೆ ತುತ್ತ ತುದಿಯಲ್ಲ. ಈ ಸುಖದ ಬೀಡಲ್ಲಿ ನನ್ನ ಬಾಳಿನ ದಾರಿಯು ಸಾಗದೆಂದು ಅನುಭವವಾಗಿದೆ. ಬಲವಾದ ಗಾಳಿಗೆ ನಾನು ಸಿಕ್ಕಿದಂತೆ ಕಾಣುತ್ತಿದ್ದೇನೆ' ಎಂದ ಶೈಲ.

'ನನಗೆ ನೀವು ಹೇಳುತ್ತಿರುವುದು ತಿಳಿಯದೇ ಇಲ್ಲ, ನನಗೆ ಅರ್ಥವಾಗುತ್ತಿದೆ' ಎಂದು ಪ್ರಭಾ ಉತ್ತರವೀಯುತ್ತಿದ್ದಳು.

ನಡೆದ ಸಂಗ್ರಾಮ ಚಟವಟಿಕೆಯಲ್ಲಿ, ಒಂದು ಹೊಸಮಾರ್ಗ ಸಂಬಿಹಿಡಿದು ಅನುಸರಿಸುತ್ತಿದ್ದ ಶೈಲನನ್ನು ಪ್ರಭಾ ಮೆಚ್ಚಿದಳು. 'ಗ್ಲೇವ್ಯೂ' ಅಲ್ಲಿ ಚೌಧುರಿ, ಹೇಮಂತರು ನಿಂತಾಗ ಭವನ ನೆಲೆಯಾದ ತೋಟದಲ್ಲಿ ಸ್ವರ್ಗಸ್ಸಾನುಭವದಲ್ಲಿ ಶೈಲ-ಪ್ರಭಾ ಸುತ್ತಾಡುತ್ತಿದ್ದರು. ಇದುವರೆಗೆ ಬಂಧನದಲ್ಲಿದ್ದಂತೆ ಶೈಲ ಉಳಿಯಲಿಲ್ಲ. ವಿಸ್ತಾರ ಗಗನವಲ್ಲಿ, ಸ್ವಚ್ಛಂದವಾಗಿ ಹಾರುವ ಹಕ್ಕಿಯಂತೆ ಆತ್ಮೋನ್ನತಿಯನ್ನು ಕಂಡುಕೊಳ್ಳುತ್ತಿದ್ದ. ಈ ನಡವಳಿಕೆ, ಹೇಮಂತ ಮತ್ತು ಚೌಧುರಿಯವರ ಗಮನಕ್ಕೆ, ಬೀಳದೆ ಹೋಗಲಿಲ್ಲ. ಉತ್ಸಾಹಿತ ತರುಣ-ತರುಣಿಯರನ್ನು ಅವರು ಸಾಧವಿಂದಲೇ ನೋಡುತ್ತಿದ್ದರು 'ಇವನು ಬದುಕಿನ ತೊಡಕನ್ನು ಸುಲಭವಾಗಿಯೇ ಬಿಡಿಸಿಕೊಳ್ಳುವವನಾಗಿದ್ದಾನೆ' ಎಂದು ಹೇಮಂತರು ಚೌಧುರಿಯವರಿಗೆ ಹೇಳಿದರು.

ಬೈಗು ಬೆಳಗಾಗುವಂತೆ, ಬೆಳಗು ಬೈಗಾಗುವಂತೆ, ಜಗದ ವಿವಿಧ ವೇಷದಲ್ಲಿ ಹೆಚ್ಚಿನ ಕಾರಣವೊಂದು ಗೋಚರವಾಯಿತು. ರಕ್ತಪಾನೋನ್ಮತ್ತರಾದವರು ಬಲಹೀನರಾಗಿ, ಮಿತ್ರರಾಷ್ಟ್ರದವರಿಗೆ ಶರಣಾಗತರಾದರು. ವಿಜಯದ ಪ್ರಕರಣ ಆರಂಭವಾದಾಗ, ಹೊಸ ಆಹ್ವಾನದ ಕರೆಯನ್ನು ಶೈಲ ಕೇಳಿದ. ಪ್ರಭೆಯೇ ಆಹ್ವಾನದ ಕರೆಗೆ ಕಾರಣಳಾಗಿದ್ದಳು.

ನಿಮಗೆ ಈ ರಾಜಸದನದಲ್ಲಿ ಕಟ್ಟಿಟ್ಟ ಬುತ್ತಿಯೇನೂ ಇಲ್ಲ. ನಡೆಸಿ ತೋರಬೇಕೆಂದಿರುವ ಮಹತ್ವ ಯೋಜನೆಯೇ ಬಹಳವಿರುವಂತೆ ಕಾಣುತ್ತದೆ. ನೀವು ಮುಂದೆ ಇಲ್ಲಿ ಇರುವುದು ಬೇಡ. ಪರಕೀಯರನ್ನು ಮೆಚ್ಚಿಸಿ ದುಡಿಯಲು ನಿಮಗೂ ಇಚ್ಛೆಯಿಲ್ಲವೆಂದು ನನಗೆ ಅರ್ಥವಾಗಿದೆ. ನಮದೇ ಆದ ಸ್ವಾತಂತ್ರ್ಯ ಭೂಮಿಯಿದೆ. ಅದು ಕಟಕ್ ನಗರದಲ್ಲಿದೆ. ಅಲ್ಲಿ ಬೇಕಾದ ವ್ಯವಸ್ಥೆಯನ್ನು ನಾವು ಮಾಡಿಕೊಳ್ಳಬಹುದು. ಅಭಿವೃದ್ಧಿ ಪಡೆಯಬಹುದು' ಎಂದು ಪ್ರಭಾ, ಶೈಲನನ್ನು ಕಟಕ್ ನಗರಕ್ಕೆ ಬರುವಂತೆ ಪ್ರೇರೇಪಿಸಿದಳು.

'ನೀನು ಹೇಳುತ್ತಿರುವುದು ನಿಜವೆ ಪ್ರಭಾ ! ಸ್ನೇಹಪೂರ್ಣವಾದ ಜೀವಕ್ಕೆ ಯೋಗ್ಯವಾದ ಠಾವು ಸಿಕ್ಕಬೇಕು ಸಹಜ. ಹಿರಿದಾದ ಭೂವಸತಿ ಸಿಕ್ಕಿ, ಸಾಧನ ಸಲಕರಣೆಗಳನ್ನು ಒದಗಿಸಿಕೊಂಡು ಸ್ವಚ್ಛಂದವಾಗಿ ಉಳಿಯಬೇಕೆಂಬ ಆಶೆ ನನಗಿದೆ. ಲಭ್ಯವಾದಲ್ಲಿ, ಆಶೆ ಕೈಗೂಡಿದಾನಂತರವೇ ಆ ಮಾತು. ಇರಲಿ, ಈಗ ಯುದ್ಧಬವಣೆ ಮುಗಿದುಹೋಗಿದೆ. ಸರ್ಕಾರವು ಪುನಃ ನಿರ್ಮಾಣದ ಕಾರ್ಯ ಆಲೋಚಿಸುತ್ತಿದೆ, ಬಂಡವಾಳಗಾರರ ಪೈಕಿ ಕೆಲವರು, ಪುನರುಜ್ಜೀವನದ ವಿಚಾರ ಕುರಿತು ಮಾತನಾಡುತ್ತಿದ್ದಾರೆ. ಇದೆಲ್ಲ ಏನು ? ನಮ್ಮ ಕಣ್ಣು ಈಗ ಮಾತ್ರ ನಿಚ್ಚಳವಾಗಿ ಹೊಳೆಯುತ್ತಿರಬೇಕು' ಎಂದು ಶೈಲಾ ತನ್ನ ಹೃದ್ಭಾವನೆಯನ್ನು ಸೂಚಿಸಿದ.

೨೮

ಅಬುಜದತ್ತರು, ಹೇಮಂತರನ್ನು ನೀಲಗಿರಿಗೆ ಕಳುಹಿಸಿದುದು ಸರಿಯಷ್ಟೆ. ನೀಲಗಿರಿಯಲ್ಲಿ, ತಮ್ಮ ಹೃದಯದ ತಳಮಳವನ್ನು ಸೈರಿಸಿಕೊಂಡು, ಪ್ರಭೆಯನ್ನೂ, ಚೌಧುರಿಯವರನ್ನೂ, ಮಹೇಶ-ಶೈಲರನ್ನೂ ಕಂಡ ಹೇಮಂತರು, ಅಬುಜದತ್ತರಿಗೆ ಒಡನೆಯೇ ಎಲ್ಲರ ಕ್ಷೇಮ ಸಂಗತಿಯನ್ನು ತಿಳಿಸಿದರು.

ದತ್ತರು, ಶೈಲ-ಮಹೇಶನನ್ನು ಕಾಣಲು ಇಚ್ಛಿಸಿ; ಅವರಿಬ್ಬರನ್ನೂ ಸಿಮ್ಲಾವಿಗೆ ಕರೆತರಲು ಹೇಮಂತರಿಗೆ ಬರೆದರು. ಶೈಲನನ್ನು ಕಟಕ್ ನಗರಕ್ಕೆ ಬರುವಂತೆ ಪ್ರಭೆ, ಪ್ರೇರೇಪಿಸುತ್ತಲೇ ಇದ್ದಳು. ಅವರಿಬ್ಬರೂ ಪ್ರೇಮ ಸ್ನೇಹದಲ್ಲಿಯೇ ಉಳಿದು, ತೋಟದಲ್ಲಿ ಸುಳಿದಾಡುತ್ತಿದ್ದರು. ಸಂಜೆಯ ಪ್ರಕೃತಿಯಲ್ಲಿ; ಪ್ರೇಮ-ಶ್ರದ್ಧೆಗಳು ಓಡಾಡುತ್ತಿರುವುದನ್ನು ಹೇಮಂತರು ನೋಡಿದ್ದರು. ಜೀವನದ ಕೊನೆಯ ದಿನಗಳನ್ನು ಎಣಿಸುತ್ತಿದ್ದ ಚೌಧುರಿಯವರು, ತಳಿರತಳಿರ ತೆಕ್ಕೆಯಂತೆ, ಹೊಂದಿ ಹಿಗ್ಗಿ ಬರುತ್ತಿದ್ದ, ಪ್ರಭಾ-ಶೈಲರನ್ನು ನೋಡಿ ಗಮ್ಯಗತಿಯನ್ನು ತಿಳಿದರು. ಬಾಳ್ವೆನೆಂಬ ಬಯಕೆ ಶೈಲನಿಗಿದೆ, ಕಾಂತಿ ಬೆಳಕಾಗಿ ನೆರವು ಕೊಡಲು, ಪ್ರಭಾ ಮುಂದೆ ನಿಂತಿದ್ದಾಳೆ ಎಂಬುದನ್ನು ಕಂಡರು.

ಪ್ರಭಾ, ಮಹೇಶನನ್ನು ಸಸ್ಯ ವೈಜ್ಞಾನಿಕ ಸಂಘಕ್ಕೆ ಕಳುಹಿಕೊಟ್ಟು, ಶೈಲನಿಗೆ ದೊರೆತ ಬಹುಮಾನ ಪತ್ರಿಕೆಯನ್ನು ತೆಗೆದುಕೊಂಡು ಬರುವಂತೆ ಕಳುಹಿಸಿದ್ದಳು. ಸಂಘ ಪ್ರವೇಶಿಸಿ, ಮುಖ್ಯಾಧಿಕಾರಿಯನ್ನು ಮಹೇಶ ಸಂಧಿಸಿ, ಶೈಲ ಬರಲಾರದ ನಿಜಸ್ಥಿತಿಯನ್ನು ತಿಳಿಸಿದ. ಮಹೇಶನ ಅಧಿಕಾರ, ವರ್ಚಸ್ಸು, ಗಮನಿಸಿದ ಅಧಿಕಾರಿ; ಬಹುಮಾನ ಪತ್ರಿಕೆಯನ್ನು ಮಹೇಶನಿಗೆ ಕೊಟ್ಟ. ಅದನ್ನು ಹಿಡಿದು ಮಹೇಶ, 'ಗ್ಲೇವ್ಯೂ' ವಿಗೆ ಬಂದು, ಶೈಲನನ್ನು ಸಂಧಿಸಿದ.

ಮಹೇಶನನ್ನು ಬರಮಾಡಿಕೊಳ್ಳುತ್ತಾ ಶೈಲ 'ಅನುಯಾಯಿಗಳನ್ನು ಅನುಸರಿಸಿಹೋದ ಮತ್ತು ಮೂರ್ತಿವೆತ್ತ ಭವಿಷ್ಯವನ್ನು ಮರೆತ, ನಿನ್ನಂತಹ ವೀರನನ್ನು ; ಹಿನ್ನಡೆದ ವೀರನೆಂದು ಕರೆಯಬೇಕು !' ಎಂದು ಕೆಣಕಿದ.

'ಹೀಗೇಕೇ ಅನ್ನುತ್ತಿಯೇ ಶೈಲಾ !' ಎಂದ ಮಹೇಶ.

'ಮತ್ತೇನು? ಹಿನ್ನಡೆದ ವೀರನೆಂದಲ್ಲದೆ, ಮುನ್ನಡೆದನೆಂದು ಹೇಗೆ ಕರೆಯಲಿ?' ಎಂದ ಶೈಲಾ.

'ಅನೇಕರು ಅನೇಕ ವಿಧವಾದ ಮಾರ್ಗ ಹಿಡಿಯುತ್ತಾರೆ, ನಾನೂ ವೀರನಾಗಬೇಕೆಂಬ ಹಂಬಲದಿಂದ ಸೈನಿಕನಾದೆ;—ಈಗ ಅತೃಪ್ತಿಯ ಸುಡಿಗಾಡಿನಲ್ಲಿ ನಿಂತಿರುವೆ' ಎಂದ ಮಹೇಶ.

'ಯುದ್ಧ ಮುಗಿಯಿತು, ಎಂದು ಧೈರ್ಯವಾಗಿದ್ದರೂ ಅಸೂಯೆ, ಅತೃಪ್ತಿ ಹೆಚ್ಚುತ್ತಲೇಯಿದೆ. ಮಹದಾಶೆಯಿಂದ ಮನೆಯನ್ನು, ಉದ್ಯೋಗವನ್ನು, ಮಹತ್ವಾಕಾಂಕ್ಷೆಯನ್ನು, ಬಿಟ್ಟು ಜನರು ಸೈನ್ಯಕ್ಕೆ ಸೇರಿದರು. ಪ್ರಾಣವನರ್ಪ

ಸಿದರು. ಈಗ ಗೆಲವು ವಶವಾಗಿದೆಯೆಂದು ಹೇಳಿಕೊಂಡು ಮೆರೆಯುತ್ತಿರುವರಲ್ಲಾ ! ಅವರಿಂದ ನಮಗೆ ಏನು ಲಾಭವಾಗುವುದು ? ಹಿಂದೂಸ್ಥಾನದ ಪ್ರಶ್ನೆಗೆ, ಸಮಂಜಸವಾದ ಉತ್ತರ ಅವರಿಂದ ದೊರೆಕಿಲ್ಲ. ಅವಿಶ್ವಾಸ ಹೆಚ್ಚುತ್ತಲೇ ಇದೆ. ಆಡಳಿತಗಾರರ ವರ್ತನೆಯಲ್ಲಿ ವ್ಯತ್ಯಾಸವೇನೂ ಕಾಣುತ್ತಿಲ್ಲ. ಸ್ವಾರ್ಥಿಗಳು ಕೈಗೊಂಡ ಬಂಡಾಯದಲ್ಲಿ ನಾವು ಉಳಿದುಕೊಂಡಿದ್ದೇವೆ. ನಡೆಸಿದ ಹೋರಾಟದಲ್ಲಿ ಪಾಲುಗಾರರಾಗಿದ್ದೇವೆ. ಬೆಂಬಲ ಕೊಟ್ಟವರಿಗೆ ಬಂದ ಲಾಭವೇನು? ರಾಷ್ಟ್ರಕ್ಕೆ ದೊರೆತ ಭಾಗ್ಯವೇನು? ವಿಜಯೋತ್ಸವ ನಡೆಯಿತಲ್ಲಾ ! ಅದು ಯಾರ ವಿಜಯ?' ಎಂದು ಕೇಳಿದ ಶೈಲ.

ಮಹೇಶ ಸುಮ್ಮನೆ ಕುಳಿತುಕೊಂಡಿದ್ದ. ಹೇಮಂತ ಮತ್ತು ಪ್ರಭಾ, ಮಹೇಶ-ಶೈಲ ಮಾತನಾಡುತ್ತಿದ್ದ ವೇಳೆಗೆ ಬಂದು ಸೇರಿದರು. ಶೈಲ ಮತ್ತೆ ಮಾತನಾಡಲು ಉಪಕ್ರಮಿಸಿದ.

'ಯುದ್ಧ ಧ್ಯೇಯಗಳ ಬಗ್ಗೆ ನಮಗೆ ನಂಬುಗೆಯಿಲ್ಲವೆಂದು, ರಾಷ್ಟ್ರನಾಯಕರು ಹೇಳುತ್ತಿದ್ದುದು ನಿನಗೆ ಜ್ಞಾಪಕವಿರಬಹುದು. ನಮ್ಮ ಇಂದಿನ ಮಿತಿಮೀರಿದ ಅಸಮಾಧಾನ, ಅವಿಶ್ವಾಸವೇ ಮುಂದಿನ ಸ್ವಾತಂತ್ರ್ಯ ಸಾಧನಕ್ಕೆ ಕಾರಣವಾಗುವುದು' ಎಂದು ಮುಗಿಸಿದ.

ಮಹೇಶ, ಆಗಿಹೋದ ವಿಷಯಕ್ಕಾಗಿ ಪಶ್ಚಾತ್ತಾಪ ಪಡುತ್ತಿದ್ದಾನೆ, ಎಂದವನ ಹೃದಯ ತಳಮಳ ಕಂಡ ಹೇಮಂತರು, 'ಇಷ್ಟು ಮಾತನಾಡುವ ಕೃಷಿಕ, ಭಾರತ ರಕ್ಷಣಾ ಕಾನೂನು ನಿರ್ಬಂಧಕ್ಕೆ ಸಿಲುಕದೇ ಇದ್ದುದು ಆಶ್ಚರ್ಯ ! ನೀನು ಇಲ್ಲಿ ಅಡಗಿರುವ ಇಡೀ ಜೀವವನ್ನು ಸೆರೆಮನೆಯಲ್ಲಿ ಕೊಳೆಸಿ, ಸೆರೆಮನೆಯಿಂದ ಅನೇಕರು ತಲೆತಪ್ಪಿಸಿಕೊಂಡು ಹೋಗಿದ್ದಾರೆ. ಅವರನ್ನು ನೆನೆದು, ಭಯಪಡುತ್ತಿದ್ದೇನೆ' ಎಂದರು ಹೇಮಂತರು.

ಈ ಪ್ರಶ್ನೆಗೆ ಉತ್ತರವಾಗಿ ಶೈಲ 'ಮೊದಲನೆಯದಾಗಿ, ನಾನು ಸೈನ್ಯಕ್ಕೆ ಸೇರಹೋಗುವವರನ್ನು ತಡೆಗಟ್ಟಲಿಲ್ಲ. ಯುದ್ಧಾಚರಣೆಯ ವಿಷಯವಾಗಿ ದೀರ್ಘ ಉಪನ್ಯಾಸವನ್ನೂ ಕೊಡಲಿಲ್ಲ. ರಾಜಕೀಯ ತಿಳಿದುಕೊಳ್ಳಬೇಕು, ಸ್ವಾತಂತ್ರ್ಯದ ಹಾದಿ ಹಿಡಿಯಬೇಕು ಎಂದು ಹೇಳುತ್ತಿದ್ದೇನೆ' ಎಂದ. 'ಎರಡನೆಯದಾಗಿ, ಕೃಷಿಕನಿಗೂ ರಾಜಕೀಯಕ್ಕೂ ಸಂಬಂಧವಿದೆಯೆಂದು ನಾನು ಖಂಡಿತವಾಗಿ ಹೇಳುತ್ತೇನೆ. ಇತರ ರಾಷ್ಟ್ರಗಳಲ್ಲಿ ಕೃಷಿಕರಿಗೆ ಎಷ್ಟು ಉಚ್ಚಸ್ಥಾನ

ವಿದೆ! ಸೌಕರ್ಯವಿದೆ. ರಾಷ್ಟ್ರಪ್ರೇಮ, ರಾಷ್ಟ್ರಸ್ವಾತಂತ್ರ್ಯ, ಅವರಿಗಿದೆ. ಕೃಷಿಕನ ಭವಿಷ್ಯವೇ ಭಾರತದಲ್ಲಿ ಮುಖ್ಯವಾಗಿರುವಾಗ, ಅವನನ್ನು ಮರೆಯಲಾಗದು' ಎಂದು ಮುಗಿಸಿದ.

'ಕೆಲವರು ಜೀವವೆಲ್ಲಾ ಸೆರೆಮನೆಯಲ್ಲಿ ಕಳೆದು ಬೇಸರಿದು ತಲೆಮರಿಸಿಕೊಂಡಿದ್ದಾರೆಂದು ಹೇಳಿದಿರಿ. ಪರರಾಷ್ಟ್ರದವರೊಂದಿಗೆ ಹೋರಾಡುತ್ತಿರುವ ನಮಗೆ ಅಸ್ತ್ರಶಸ್ತ್ರಗಳೆಲ್ಲಿ ದೊರೆಯಬೇಕು? ನಾವು ಎಲ್ಲವನ್ನೂ ಪ್ರತಿಭಟನೆಯಿಂದಲೇ ಪೂರೈಸಿಕೊಂಡು ಬರುತ್ತಿದ್ದೇವೆ. ಜೀವನೆಲ್ಲಾ ಸೆರೆಯಲ್ಲಿ ಮುಗಿಸುವುದರ ಬದಲು, ಅತಿಹಿಂಸೆಯನ್ನು ಅನುಭವಿಸುವುದರ ಬದಲು, ಅವರೆಲ್ಲ ಮರೆಯಾಗಿದ್ದಾರೆ. ಈ ಅಜ್ಞಾತವಾಸಕ್ಕೆ, ಹಿರಿಯರಾಷ್ಟ್ರಗಳು ನಮಗೆ ಮಾದರಿಯಾಗಿದೆ-ಚೀನಾ ಮಂಚು ಸಂತತಿಯವರ ಪ್ರಭುತ್ವದಿಂದ ಭಯಂಕರವಾದ ದುರವಸ್ಥೆ ಕಂಡಿತಲ್ಲ, ಅದನ್ನು ಎದುರಿಸಿದ, ರಾಷ್ಟ್ರಪಲ್ಲಟಮಾಡಿದ ಡಾಕ್ಟರ್ ಸನ್ಯಾತ್ಸೇನ್ ಎಷ್ಟು ಅಲೆದ? ಎಷ್ಟು ಸಾಹಸ ಮಾಡಿದ? ದೇಶಭ್ರಷ್ಟನಾಗಿ ತಲೆಮರೆಸಿಕೊಂಡು ಪ್ರಚಾರ ಮಾಡಿದ. ರಾಷ್ಟ್ರಸ್ಥಾಪನೆಯ ಗುರಿಹಿಡಿದವರು, ಎಷ್ಟು ಜನ ವಧೆಗೆ, ಗಡೀಪಾರಿಗೆ ಗುರಿಯಾಗಲಿಲ್ಲ? ಬರಿಯ ತತ್ವದಲ್ಲೇ ಅವರು ವಿಚಿತ್ರತರವಾದ ಹಿಂಸೆಯನ್ನು ಸಹಿಸಿ ಪ್ರಾಣ ಬಿಡುವುದೇ? ರಾಷ್ಟ್ರಪ್ರೇಮಿಗಳು ಪಲಾಯನ ಮಾಡಿದ್ದಾರೆಂದು, ಕಾರ್ಯವಿಮುಖರಾದರೆಂದು ಹೇಳುವುದು ತಪ್ಪು ಅಭಿಪ್ರಾಯ' ಎಂದು ಶೈಲ ದಿಟ್ಟವಾಗಿಯೇ ಉತ್ತರ ಕೊಟ್ಟ.

ಶೈಲನ ಉಜ್ವಲ ವಾಕ್ಸರಿಯನ್ನು ಕೇಳಿ ತೃಪ್ತರಾದ ಹೇಮಂತರು ಸಂಭಾಷಣೆಯನ್ನು ಮುಂದುವರಿಸಲಿಲ್ಲ. ಅಬುಜದತ್ತರು ಬರೆದ ಕಾಗದವನ್ನು ಶೈಲನಿಗೆ ತೋರಿ 'ನಿನ್ನನ್ನು ಕಾಣಬೇಕೆಂದು ಬರೆದಿದ್ದಾರೆ. ಸಿವಸ್ಲಾವಿಗೆ ಹೋಗಬೇಕು ಶೈಲಾ!' ಎಂದರು.

ಶೈಲನಿಗೂ ದತ್ತರನ್ನು ಕಾಣುವ ಇಚ್ಛೆಯಾಯಿತು. 'ಇಲ್ಲಿ ನಿಂತಂದಿನಿಂದಲೂ ನಾನು ಎಲ್ಲಿಗೂ ಹೊಗಡಲಾಗಲಿಲ್ಲ' ಎಂದು ಹೊರಡುವ ನಿಶ್ಚಯವನ್ನು ಶೈಲ ಸೂಚಿಸಿದ.

ಆಗಾಗಲೇ ಶೈಲನ ಒಡಂಬಡಿಕೆಯನ್ನು ಪಡೆದುಕೊಂಡ ಪ್ರಭಾ, ಹೇಮಂತ-ಮತ್ತು ಚೌಧುರಿಯವರೊಂದಿಗೆ ಕಟಕ್ ನಗರಕ್ಕೆ ಹೋಗಿ ನಿಲ್ಲುವ ಯೋಜನೆ ತಿಳಿಸಿದಳು.

'ಶೈಲನ ಧ್ಯೇಯವ್ರತದ ಪೀಠ ನೀಲಗಿರಿಯಲ್ಲಿಯೇ ಆಗಿರುವಾಗ, ಅವನು ನಮ್ಮೊಂದಿಗೆ ಹೇಗೆ ಬರುವನು ಪ್ರಭಾ? ಬರಲೊಪ್ಪಿದ್ದಾನೆಯೇ?' ಎಂದು ಹೇಮಂತರು ಕೇಳಿದರು. ಚೌಧುರಿಯವರು ಸಹ ತಮ್ಮ ಸಂದೇಹ ತೋರಿದರು.

'ನಮ್ಮ ಠಾವಿನಲ್ಲಿಯೇ ಸ್ವಚ್ಛಂದವಾಗಿ ಬೆಳೆಸಿ ರಾರಾಜಿಸುವುದನ್ನು ಕಾಣಬಹುದು. ಅಲ್ಲಿ ನಮ್ಮ ಪರಿಶ್ರಮಕ್ಕೆ ತಕ್ಕ ಪುರಸ್ಕಾರ ದೊರೆಯುವುದು. ಪರಕೀಯರು ನಮ್ಮ ದುಡಿತದ ಹಿರಿಮೆಯನ್ನು ಅರಿಯರು. ಅವರ ದೃಷ್ಟಿ, ಸಹಾನುಭೂತಿಯೇ ನಮಗೆ ದೊರೆಯದು. ಅವರನ್ನು ಮೆಚ್ಚಿಸಹೋಗುವ ಬದಲು ಸ್ವಂತವಾಗಿ ದುಡಿದು ಪ್ರಯೋಜನ ಕಾಣುವುದು ಒಳ್ಳಿತೆಂದು, ನಾನು ಒಪ್ಪಿಸಿರುವೆ' ಎಂದು ಪ್ರಭಾ, ಚೌಧುರಿ-ಹೇಮಂತರ ಸಂದೇಹ ನಿವಾರಿಸಿದಳು.

ಎಲ್ಲರೂ ಯುಕ್ತ ವಿಚಾರಕ್ಕೆ ಒಪ್ಪಿದರು. ಜ್ಞಾನ ಬೆಳೆಸಬೇಕೆಂದಿದ್ದ ಶೈಲ 'ಗ್ಲೇವ್ಯೂ' ತೊರೆದು ಬರಲು ಸಿದ್ಧನಾದ. ಅವನು ಪ್ರಭೆಯ ಕರೆಯನ್ನು ನಿರಾಕರಿಸಲಾರದೇ ಹೋದ.

'ಚದರಿಹೋದ ನಾವೆಲ್ಲರೂ ಒಟ್ಟುಗೂಡುವ ಸುಸಂದರ್ಭಒದಗಿಬಂದಿದೆ ಶೈಲಾ! ನಾವೆಲ್ಲರೂ ಒಟ್ಟುಗೂಡಿರುವೆವು, ಸ್ನೇಹ ಸಂಬಂಧಿಗಳಾಗಿರುವೆವು. ನನ್ನ ಮತ್ತು ಚೌಧುರಿಯವರ ಸ್ನೇಹದ ಸೇತುವೆಯನ್ನು ನೀನು ಕಟ್ಟಿದೆ. ನಾವೆಲ್ಲರೂ ನೇರವಾಗಿ ಸಿಮ್ಲಾವಿಗೆ ಹೋಗಿ ದತ್ತರನ್ನು ಕೂಡೋಣ. ಅಲ್ಲಿಂದ ಕಟಕ್ ನಗರಕ್ಕೆ ಹೊರಡೋಣ' ಎಂದು ಹೇಮಂತರು ಸ್ಪಷ್ಟೀಕರಿಸಿದರು.

ಸ್ವತಂತ್ರ ವಿಚಾರ ಜೀವಿಯ ಅಧ್ಯಾಯ ನೀಲಗಿರಿಯಲ್ಲಿ ಮುಗಿಯಿತು. ಉಗಿಯ ಬಂಡಿ ಹೊಗೆಯನ್ನು ಚಾಚುತ್ತ 'ಗ್ಲೇವ್ಯೂ' ಭವನದಲ್ಲಿ ಪರಾಧೀನನಾಗಿದ್ದ ಶೈಲನನ್ನು, ಅವನೊಂದಿಗಿದ್ದ ಹಿತಚಿಂತಕರನ್ನು, ನೀಲಗಿರಿಯಿಂದ ಸ್ವಾತಂತ್ರ್ಯ ಭೂಮಿಗೆ ಒಯ್ಯುತ್ತಿತ್ತು. 'ಪ್ರಭಾ, ಶೈಲಾ, [illegible], ಚೌಧುರಿಯವರನ್ನು ನಾನು ನೀಲಗಿರಿಯಲ್ಲಿ ಕಂಡೆ ಎಲ್ಲರೂ ನನ್ನ [illegible] ಗೂರ ಹೋಗುತ್ತಿದ್ದಾರೆ' ಎಂದು ಬಹಳ ವ್ಯಸನದಿಂದ ಮಹೇಶ, ಪ್ರಭಾ-ಶೈಲ, ನಿಲ್ದಾಣದಿಂದ ದೂರವಾಗಿ; ಮಹೇಶನಿಗೆ ಕೈ-[illegible] ತೋರುತ್ತಾ ಹೋಗುತ್ತಿದ್ದರು.